# ದೇವನೂರ ಮಹಾದೇವ

ಬಿ.ಎಂ. ಪುಟ್ಟಯ್ಯ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

Devanura Mahadeva: By B. M. Puttaiah, Published by Dr. Karigowda Beechanahalli, Director, Prasaranga, Kannada University, Hampi, Vidyaranya, Kamalapura 583 221, PP: VI + ೩೫
Rs. 12/-

First Impression: 1996

ನಮ್ಮವರು ಪುಸ್ತಕಮಾಲೆ - ೧೭



ಮುಖಪುಟ ವಿನ್ಯಾಸ: ಕೆ. ಮಕಾಳಿ

**ಪ್ರಕಾಶಕರು**
ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧

ಬೆಲೆ: ಹನ್ನೆರಡು ರೂಪಾಯಿಗಳು

ಛಾಯಾಕ್ಷರ ಜೋಡಣೆ: ವರ್ಷಿಣಿ ಗ್ರಾಫಿಕ್ಸ್
ಬೆಂಗಳೂರು - ೪೦

**ಮುದ್ರಕರು**
ಸ್ನೇಹಾ ಪ್ರಿಂಟರ್ಸ್
೨೨, ೨ನೇ ಮೈನ್, ಅತ್ತಿಗುಪ್ಪೆ
ವಿಜಯನಗರ ೨ನೇ ಹಂತ
ಬೆಂಗಳೂರು - ೫೬೦ ೦೪೦

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ- ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಮಹತ್ವದ ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

## ಪರಿವಿಡಿ

# ದೇವನೂರ ಮಹಾದೇವ

ದೇವನೂರ ಮಹಾದೇವ ಅವರ ಮೊದಲ ಹೆಸರು ಎನ್. ಮಹಾದೇವಯ್ಯ ಎಂದು. ಇವರು ಹುಟ್ಟಿದ್ದು ೧೦-೬-೧೯೪೮ರ. ಮೈಸೂರು ಜಿಲ್ಲೆಯ ನಂಜನಗೂಡು ತಾಲುಕಿನ ದೇವನೂರಿನಲ್ಲಿ. ವಿದ್ಯಾರ್ಥಿಯಾಗಿದ್ದಾಗ, ಸಮಾಜವಾದೀ ಯುವಜನಸಭಾದ ಕಾರ್ಯಕರ್ತರಾಗಿದ್ದರು. ಕೆಲವು ಗೆಳೆಯರೊಂದಿಗೆ ಸೇರಿ ವಿದ್ಯಾರ್ಥಿ ಸಮುದಾಯಕ್ಕೆಂದು 'ನರ' ಪತ್ರಿಕೆಯನ್ನು ತರುತ್ತಿದ್ದರು. ಪ್ರೊ. ಎಂ. ಡಿ. ನಂಡುಂಡಸ್ವಾಮಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ಮಾನವ' ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರಾಗಿದ್ದರು. ಇಂದೂಧರ ಹೊನ್ನಾಪುರ ಅವರ ಸಂಪಾದಕತ್ವದಲ್ಲಿ ಕೆಲವು ವರ್ಷಗಳ ಕಾಲ ನಡೆದ 'ಸುದ್ದಿ ಸಂಗಾತಿ' ವಾರ ಪತ್ರಿಕೆಯ ನಿರ್ದೇಶಕರಲ್ಲಿ ಇವರೂ ಒಬ್ಬರಾಗಿದ್ದರು.

ಇವರು ಕರ್ನಾಟಕ ಸರ್ಕಾರದ ಕನ್ನಡ ಕಾವಲು ಸಮಿತಿ, ರಾಜ್ಯ ಗ್ರಂಥಾಲಯ ಸಮಿತಿ, ಗಂಗಾ-ಕಾವೇರಿ ಸಾಧನ ಸಮಿತಿ ಇವುಗಳ ಸದಸ್ಯರಾಗಿದ್ದರು. ಎರಡು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಮತ್ತು ಡಾ. ಅಂಬೇಡ್ಕರ್ ಸಾಹಿತ್ಯ ಅನುವಾದ ಸಮಿತಿಯ ಸದಸ್ಯರೂ ಆಗಿ ಸೇವೆ ಸಲ್ಲಿಸಿದ್ದಾರೆ. ೧೯೭೯ರಲ್ಲಿ ಬೆಂಗಳೂರಿನಲ್ಲಿ ನಡೆದ ಬಂಡಾಯ ಸಾಹಿತ್ಯ ಸಂಘಟನೆಯ ಪ್ರಥಮ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಕರ್ನಾಟಕ ದಲಿತ ಸಂಘರ್ಷ ಸಮಿತಿಯಲ್ಲಿ ರಾಜ್ಯ ಸಮಿತಿಯ ಸದಸ್ಯರೂ, ಸಂಚಾಲಕರೂ ಆಗಿದ್ದರು. ೧೯೭೫ರಿಂದ ೧೯೮೯ರವರೆಗೆ ಮೈಸೂರಿನ ಭಾರತೀಯ ಭಾಷಾ ಸಂಸ್ಥೆಯಲ್ಲಿ (ಸಿ.ಐ.ಐ.ಎಲ್) ಅಧ್ಯಾಪಕರಾಗಿ ಕೆಲಸಮಾಡಿ ನಂತರ ರಾಜೀನಾಮೆ ನೀಡಿ, ಈಗ ಕೃಷಿಕರಾಗಿದ್ದಾರೆ.

ಇವರ ಸಾಹಿತ್ಯ ಕೃಷಿಗೆ ಪ್ರತಿಷ್ಠಿತ ಬಹುಮಾನ ಹಾಗೂ ಪ್ರಶಸ್ತಿಗಳು ಬಂದಿವೆ. 'ಒಡಲಾಳ' ಕೃತಿಗೆ ೧೯೮೪ರ ಭಿಲವಾರ ಪ್ರಶಸ್ತಿ ಬಂದಿದೆ. ಇದು ಭಾರತೀಯ ಭಾಷಾ ಪರಿಷತ್ತು, ಭಾರತೀಯ ಭಾಷೆಗಳಲ್ಲಿ ಸೃಜನಶೀಲ ಕೃತಿಗೆಂದು ಸರದಿಯ ಮೇಲೆ ನೀಡುವ ಪ್ರಶಸ್ತಿ. ಇವರ 'ಕುಸುಮಬಾಲೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ೧೯೯೦ರ ಪ್ರಶಸ್ತಿ ದೊರೆತಿದೆ. ಇವರ ಸಾಹಿತ್ಯ ಸಾಧನೆಗೆಂದು ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿದೆ. ೧೯೮೯ರಲ್ಲಿ ಅಮೇರಿಕಾದ ಅಯೋವಾ ವಿಶ್ವವಿದ್ಯಾಲಯದಲ್ಲಿ ನಡೆದ 'International Writing Programme'ನಲ್ಲಿ ಮಹಾದೇವರು ಭಾಗವಹಿಸಿದ್ದರು.

## ಸ್ಥಿತ್ಯಂತರ

೧೯೬೫ರ ಸುಮಾರಿನಲ್ಲಿ ಉಂಟಾದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗು ಸಾಂಸ್ಕೃತಿಕ ಸ್ಥಿತ್ಯಂತರಗಳು, ಇದರಿಂದ ದಲಿತರಿಗೆ ಸಿಕ್ಕಿದ ಶೈಕ್ಷಣಿಕ ಅವಕಾಶಗಳು, ಅದರಿಂದ ದೊರೆತ ನೌಕರಿ- ಇವು ದಲಿತರಲ್ಲೇ ಕೆಲವರ ಜೀವನ ಸೌಲಭ್ಯಗಳನ್ನು ವಿಸ್ತರಿಸಿದವು. ಧಣಿಗಳ ಜಮೀನಿನಲ್ಲಿ ಕೈಕಾಲೊಪ್ಪಿಸಿದ ಕೂಲಿ ಜೀತಕ್ಕಿಂತ ಇದು ತೀರಾ ಭಿನ್ನವೆನಿಸಿತು. ಈ ಹಂತ ತಲುಪಿದ್ದು ಅಕ್ಷರ ಜ್ಞಾನದ ಮೂಲಕವಾದ್ದರಿಂದ ಅಕ್ಷರಜ್ಞಾನ, ಶಿಕ್ಷಣ ಇವು ದಿಗ್ಭ್ರಮೆಗೊಳಿಸಿದವು. ಮತ್ತು ಇವನ್ನೇ ತಮ್ಮ ವರ್ಗದ ವಿಮೋಚನೆಯ ಏಕೈಕ ಅಂತಿಮ ಅಸ್ತ್ರವೆಂದು ಭಾವಿಸುವಂತಾಯಿತು. ತಮ್ಮ ಮೂಲ ಬದುಕಿನ ಬಗ್ಗೆ ದಟ್ಟವಾದ ಕೀಳರಿಮೆ, ಅಸಹನೆಗಳು ಒಟ್ಟೊಟ್ಟಿಗೇ ಉಂಟಾದವು. ಅಂತೂ ಹೀಗೆ ಈ ರೀತಿಯಲ್ಲಿ ಸವಲತ್ತುಳ್ಳ ದಲಿತ ಸಮೂಹವೊಂದು ತಲೆ ಎತ್ತಿತು.

ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿ ಹಲವು ಹಿನ್ನೆಲೆಗಳಿಂದ ಅಂಕುರಿಸಿತು. ಇದರ ಮುಂಚೂಣಿಯ ಸ್ಥಾನ ಸಹಜವಾಗಿ ಸವಲತ್ತುಳ್ಳ ದಲಿತರ ಕೈಗೇ ಬಂತು. ಶಿಕ್ಷಣ, ಸರ್ಕಾರಿ ಸೇವೆ, ರಾಜಕೀಯ - ಇವುಗಳಲ್ಲಿ ವಂಚಿತರಾದ ಸಮೂಹದ ಕೆಲವೇ ಕೆಲವರಿಗೆ ಅದೂ ಮೀಸಲಾತಿಯಿಂದಾಗಿ ಅವಕಾಶ ದೊರೆಯಿತು. ಈ ಸೀಮಿತ ಸೌಲಭ್ಯಗಳ ಪರಿಮಿತಿಯೊಳಗೇ ವಿಮೋಚನಾ ಆಲೋಚನೆಯೊಂದು ಹುಟ್ಟಿತು. ಇದನ್ನು ಒಟ್ಟು ಸಮೂಹ ಕೇಂದ್ರಿತ ವಿಮೋಚನಾ ಮಾದರಿಯನ್ನಾಗಿ ಈ ವರ್ಗ ಭಾವಿಸಿತು. ಈ ಮಾದರಿ ಜಮೀನ್ದಾರಿಕೆಯನ್ನಾಗಲಿ, ಪ್ರಭುತ್ವವನ್ನಾಗಲಿ ಕಿಂಚಿತ್ ಅಲ್ಲಾಡಿಸಲೂ ಆಗಲಿಲ್ಲ. ಕರ್ನಾಟಕದ ದಲಿತ ಹೋರಾಟವೂ ಇದೇ ದಿಕ್ಕಿನಲ್ಲಿ ಸಾಗತೊಡಗಿತು. ಇದಲ್ಲದೆ ಬೇರೆ ಸಾಧ್ಯತೆಗಳ ಪ್ರಾಯೋಗಿಕ ಅನುಭವವಾಗಲಿ, ಸೈದ್ಧಾಂತಿಕ ತಿಳುವಳಿಕೆಯಾಗಲಿ ಮುಂಚೂಣಿಯ ದಲಿತರ ಪಾಲಿಗೆ ದೂರವೇ ಉಳಿದವು. ಇಂಥವುಗಳ ಒಟ್ಟು ಫಲಿತದಿಂದಾಗಿ ಉದಾರವಾದಿ ಮಾನವತಾವಾದ ತಲೆ ಎತ್ತಿತು.

ಮೊದಲು ಮನಃಪರಿವರ್ತನೆ; ಈ ಪರಿವರ್ತನೆಯಿಂದ ಸಮಗ್ರ ಬದಲಾವಣೆ - ಎಂಬ ಸೂತ್ರ ಸಿದ್ಧವಾಗತೊಡಗಿತು. ಮನಃ ಪರಿವರ್ತನೆಯ ಈ ಧೋರಣೆ ಪ್ರಭುತ್ವಕ್ಕೆ ಒಂದು ಮೌಲ್ಯ. ಆದರೆ ಇದೇ ಧೋರಣೆ ಶೋಷಿತ ಜನಕೋಟಿಗೆ ದೌರ್ಬಲ್ಯ. ಈ ಧೋರಣೆಯ ಪ್ರತಿಪಾದನೆ ಒಂದು ಕಡೆ ಪ್ರಭುತ್ವವನ್ನು ಸಮರ್ಥಿಸುತ್ತಾ, ಗಟ್ಟಿಗೊಳಿಸುತ್ತಾ, ಸಾಗಿದರೆ, ಮತ್ತೊಂದು ಕಡೆ ಶೋಷಿತರಲ್ಲಿ ದಟ್ಟ ನಿರಾಸೆ, ನಿರ್ವೀರ್ಯತೆ ಮತ್ತು ಅಸಹಾಯಕತೆಗಳನ್ನು ಬಲಗೊಳಿಸುತ್ತಾ ಸಾಗುತ್ತದೆ. ಶೋಷಕ ಧಣಿಗಳಿಗೆ ಸಮರ್ಪಿಸಿಕೊಳ್ಳುತ್ತಾ, ಮಾರಿಕೊಳ್ಳುತ್ತಾ ಅಸಹ್ಯವನ್ನು ಸಮರ್ಥಿಸಿಕೊಳ್ಳುತ್ತಾ ಸಾಗುವ ಇದು, ಯಾವುದೇ ಆಸೆ ಭರವಸೆಗಳನ್ನು ಮೂಡಿಸದೆ ಮೌನವಹಿಸುತ್ತದೆ. ಮತ್ತೊಂದು ಮಗ್ಗುಲಿನಲ್ಲಿ ಪ್ರಭುತ್ವದ ಮೌಲ್ಯವನ್ನು ಸಮರ್ಥಿಸುವಂತಿರುತ್ತದೆ. ಹೀಗೆ ಶ್ರಮ ಜೀವಿವರ್ಗದ ಒಂದೊಂದು ದೌರ್ಬಲ್ಯವೂ ಶೋಷಕರ ಮೌಲ್ಯಗಳಾಗುತ್ತಲೇ ಹೋಗುತ್ತವೆ.

ದೇವನೂರ ಸಾಹಿತ್ಯದ ಸೃಜನಶೀಲತೆಯ ಹಿಂದಿನ ಮೌಲ್ಯ ಪ್ರತಿಪಾದನೆಯನ್ನು ಪ್ರಧಾನವಾಗಿ ಗಮನದಲ್ಲಿಟ್ಟುಕೊಂಡು ಮುಂದಿನ ಬರವಣಿಗೆ ಸಾಗುತ್ತದೆ.

**ದ್ಯಾವನೂರು**

'ದ್ಯಾವನೂರು' (೧೯೭೩) ಇವರ ಏಳು ಕತೆಗಳ ಸಂಕಲನ. ಈ ಸಂಕಲನದ ಮೊದಲ ಕತೆ 'ಮಾರಿಕೊಂಡವರು'. ಈ ಅಂಶವೇ ಮಗ್ಗುಲು ಮಗ್ಗುಲಾಗಿ ಹೆಣೆದುಕೊಂಡು ಕತೆಯನ್ನು ರಚಿಸಿದೆ. ವ್ಯವಸ್ಥೆಯ ಕ್ರೌರ್ಯದ ಪರಮಾವಧಿ, ಇಲ್ಲಿಯ ಬೀರ ಮತ್ತು ಲಕ್ಷ್ಮಿಯರನ್ನು ನಿರ್ಗತಿಕರನ್ನಾಗಿ ಮಾಡಿ ಈ ಸ್ಥಿತಿಗೆ ಮಾರಿದೆ. ಈ ಸ್ಥಿತಿಯಿಂದ ಇವರನ್ನು ಮೇಲುಜಾತಿಯ ಜನ ಕೂಲಿ ಆಳಾಗಿ ಅಮಾನತ್ತಾಗಿ ಕೊಂಡುಕೊಳ್ಳುವಂತೆ ಮಾಡಿದೆ. ಇಂಥ ಸಂಬಂಧದ ಪ್ರಕ್ರಿಯೆಯೇ ವಿಸ್ತೃತ ರೂಪ ಪಡೆದಿದೆ. ನಿರ್ದಿಷ್ಟ ನೆಲೆ ಇಲ್ಲದೆ ಕೆಲಸಕ್ಕಾಗಿ ಅಲೆಯುತ್ತಿದ್ದ, ಕೈಲಿ ಕಾಸಿಲ್ಲದೆ ಟಿಕೆಟ್ ರಹಿತ ಪ್ರಯಾಣ ಮಾಡುತ್ತಿದ್ದ ಬೀರ ಮತ್ತು ಲಕ್ಷ್ಮಿಯರು ಅಕಸ್ಮಾತ್ ಗೌಡರ ಕಣ್ಣಿಗೆ ಕಾಣುತ್ತಾರೆ. ಗೌಡರು ಅವರನ್ನು ವಿಚಾರಿಸಿ, ಒಂದು ನೆಲೆ ಕೊಡುತ್ತಾರೆ. ಯಾರ ಹಂಗೂ ಇಲ್ಲದ ನಿರ್ಗತಿಕರಿಗೆ ಒಂದು ನೆಲೆಯು ಅಗತ್ಯವಿದೆ. ಈ ಆಶ್ರಿತ ನೆಲೆಯಿಂದಾಗಿ ಗೌಡರು ಅವರಿಗೆ ದೇವರಂತೆ ಕಾಣುತ್ತಾರೆ. ಆದರೆ ಇದಿಷ್ಟೇ ಅಲ್ಲ; ಇದರ ಮತ್ತೊಂದು ಮಗ್ಗುಲು ಶ್ರಮ ಶೋಷಣೆ ಮತ್ತು ಲೈಂಗಿಕ ಶೋಷಣೆಯ ಆರಂಭ ಬಿಂದು.

ಇಲ್ಲಿಯ ಕಿಟ್ಟಪ್ಪ ಸರಿಯಾಗಿ ಓದಲಾರದೆ, ಮನೆಯನ್ನು ನಡೆಸಲಾರದೆ, ತಂದೆಯ ಮರ್ಯಾದೆಯನ್ನು ಉಳಿಸಲಾರದೆ, ಮೂರು ಜನ ಹೆಂಗಸರಿಗೆ ತನ್ನನ್ನು ಮಾರಿಕೊಂಡಿದ್ದಾನೆ. ಭೂಮಾಲೀಕರ ಒಂದು ತಲೆಮಾರಿನ, ಮಾರಿಕೊಳ್ಳುತ್ತಿರುವ ಯುವಜನಾಂಗದ ಪ್ರತಿನಿಧಿ ಕಿಟ್ಟಪ್ಪ ಎಂದು ವಿವರಿಸಲು ಹೆಣಗಿದಂತೆ ತೋರುತ್ತದೆ. ಇಂಥ ಕ್ರೌರ್ಯದ ಅಟ್ಟಹಾಸಕ್ಕೆ ಬೀರ ಅಸಹಾಯಕನಾಗಿದ್ದಾನೆ. ಎಷ್ಟಾದರೂ ಆತ ತಮಗೆ ಅನ್ನ ಹಾಕುವ ಧಣಿ. ಇಂಥ ನಿರ್ಗತಿಕ ಸ್ಥಿತಿಯಲ್ಲಿಯೂ ಮಿಲ್ಲಿನ ಪಾಷಾನನ್ನು ಊಟಕ್ಕೆ ಕರೆಯುವ ದೊಡ್ಡ ಗುಣ ಬೀರನದು. ಕಿಟ್ಟಪ್ಪನನ್ನಾದರೆ ಕರೆಯಲೇಬೇಕಿಲ್ಲ. ಅವನೇ ಬರುತ್ತಾನೆ. ಏಕೆಂದರೆ ಆ ಸಂಬಂಧದ ಸ್ವರೂಪವೇ ಬೇರೆ. ಅದು ಬೂದಿ ಮುಚ್ಚಿದ ಕೆಂಡದ ರೀತಿಯದು. ಲಕ್ಷ್ಮಿ - ಕಿಟ್ಟಪ್ಪನ ಸಂಬಂಧ ಬೀರನಿಗೆ ಗೊತ್ತಿದ್ದೂ ಕೂಡ ಸುಮ್ಮನಿರುವಾತ; ಗೌಡರ ಹಟ್ಟಿಯಲ್ಲಿ ಲಕ್ಷ್ಮಿಯನ್ನು ಕೆಣಕಿದವನಿಗೆ, "ನಿನ್ನ ಸಾವ್ಕಾರಿಕೆ ಇದ್ರೆ ನಿನ್ನ ಮಟ್ಟಿಗೆ ಕನ್ಲ. ನಂಗೂ ವಸಿ ತೋರಿಸೋಕೆ ಬತ್ತೀಯಾ?" ಎಂದು ರೇಗಾಡಿದವ. ಆಗ ಗೌಡ ಸಮಾಧಾನಪಡಿಸುವುದೂ ಕೂಡ ತನ್ನ ಹಿತಾಸಕ್ತಿಗೇ ಹೊರತು ಬೀರನಿಗಾಗಿ ಅಲ್ಲ.

ಕಿಟ್ಟಪ್ಪ - ಲಕ್ಷ್ಮಿಯರ ಸಂಬಂಧದ ಬಗ್ಗೆ ಬೀರನಿಗೆ ಮೊದಮೊದಲು ಅನುಮಾನ, ಅನಂತರ ಸ್ಪಷ್ಟ. ಕುಡಿದ ಅಮಲಿನಲ್ಲಿ ರೋಷ, ಸೇಡಿನ ಮನೋಭಾವದ ಪ್ರಕಟನೆ, ಸಮಸ್ಥಿತಿಯಲ್ಲಿ ಅಸಹಾಯಕತೆ.

ಒಂದು ದಿನ ಕಿಟ್ಟಪ್ಪ ಶಿಸ್ತು ಮಾಡಿಕೊಂಡು ಬೀರನ ಮನೆಗೆ ಬರುವನು. "ಏನಾರ ಮದ್ವೆ ಹೆಣ್ಣ ನೋಡಾಕ ಬಂದಿದಿರಾ ಕಿಟ್ಟಪ್ಪ?" ಬೀರ ನಗು ನಗುತ್ತಾ ಅಂದಾಗ ಕಿಟ್ಟಪ್ಪನೂ ನಕ್ಕನು. ಕತೆಯ ಈ ಸನ್ನಿವೇಶ ಪರಿಣಾಮದ ದೃಷ್ಟಿಯಿಂದ ಬಹಳ ಮುಖ್ಯವಾದುದು. ಈ ಸಂಬಂಧವು ಬೀರನಿಗೆ ನಾನಾ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಕುಡಿದರೆ ಕರುಳು ಕೊರೆದು ಸಾಯುತ್ತಾರಂತೆ ಎಂದು ಲಕ್ಷ್ಮಿ ಹೇಳಿದಾಗ, ಬೀರ ಅಂದುಕೊಳ್ಳುವುದು ಹೀಗೆ, "ಏನಾರು ಸಾವ್ಕಾರರಿಗೆ ಆದಂಗೆ ನಂಗೂ ಆಗಿ ಬಿಟ್ಟರೆ? ಲಚಮಿಗೆ ದಿಕ್ಕು? ಯಾಕೆ? ಹೆಂಗೆಂಗೊ ಆಗತೊಡಗಿತು." ಹೀಗೆ ಇಡೀ ಕತೆಯೊಳಗೆ ಇದು ಬೀರನನ್ನು ದಹಿಸುತ್ತದೆ. ಅಥವಾ ಇಂಥ ಸಂದಿಗ್ಧತೆಗೇ ಬೀರ ಮಾರಿಕೊಂಡಿದ್ದಾನೆ; ಮಾತ್ರವಲ್ಲ ಹೆಂಡದ ದಾಸನಾಗಿದ್ದಾನೆ. ಕುಡಿದ ಅಮಲಿನಲ್ಲಿ ಕಡಿದು ಹಾಕುತ್ತೇನೆಂದು ರೇಗಿದವನು, ಕತೆಯ ಕೊನೆಯಲ್ಲಿ ಕಿಟ್ಟಪ್ಪನ ನಗುವಿಗೆ ತಾನೂ ನಕ್ಕು ಮೌನ ವಹಿಸುತ್ತಾನೆ.

ರಾತ್ರಿ ಮಲಗಿದಾಗ ಲಕ್ಷ್ಮಿಯ ಜೊತೆಗೆ ಕಿಟ್ಟಪ್ಪ ಬಂದಾಗ, ಲಕ್ಷ್ಮಿ ಹೆದರುತ್ತಾಳೆ. ಆದರೆ 'ಬೀರ ಮಲಗವನೆ' ಎಂದು ಸಮ್ಮತಿ ಸೂಚಿಸುತ್ತಾಳೆ. ಮಲಗವನೆ ಎಂದರೆ ನಿದ್ರೆ ಮಾಡುತ್ತಿದ್ದಾನೆಂದೇ ಅರ್ಥ. ಎಚ್ಚರವಾಗಿದ್ದಾನೆಂದು ಹೇಳುವುದೇ ಇಲ್ಲ. ಲಕ್ಷ್ಮಿಯ ಈ ರೀತಿಯ ಪ್ರತಿಕ್ರಿಯೆ ಪ್ರಶ್ನೆಯಾಗಿ ಉಳಿಯುತ್ತದೆ.

ಕತೆಯ ಮೈಯಲ್ಲಿರುವುದು ಜಮೀನ್ದಾರಿ ಸಮಾಜದ ಆರ್ಥಿಕ ಸಂಬಂಧ; ಮತ್ತು ಇದರ ನೆಲೆಯೊಳಗೇ ಉಂಟಾಗುವ ಲೈಂಗಿಕ ಸಂಬಂಧ. ಇವು ಒಂದರೊಡನೊಂದು ಬೆಸೆದು ಬಂದಿವೆ. ಗಂಡ-ಹೆಂಡತಿಯರ ಪ್ರೀತಿ- ಪ್ರೇಮ, ಹಾಸ್ಯ, ವ್ಯಂಗ್ಯ, ಸಿಟ್ಟು, ಸ್ವಾಭಿಮಾನ, ಅಸಾಹಯಕತೆಗಳು ವಸ್ತುವಿಗನುಗುಣವಾಗಿ ಭಾಷೆಯ ಮೂಲಕ ಆಕಾರ ಪಡೆಯುತ್ತಾ ಸಾಗುತ್ತವೆ.

ಕಿಟ್ಟಪ್ಪ ತನ್ನನ್ನು ಮೂರು ಹೆಣ್ಣುಗಳಿಗೆ ಮಾರಿಕೊಂಡಿದ್ದಾನೆ. ಲಕ್ಷ್ಮಿ ಕಿಟ್ಟಪ್ಪನಿಗೆ ಮಾರಿಕೊಂಡಿದ್ದಾಳೆ. ಬೀರ ಕುಡಿತಕ್ಕೆ ಮಾರಿಕೊಂಡಿದ್ದಾನೆ. ಲಕ್ಷ್ಮಿ -ಬೀರ ಇಬ್ಬರೂ ಗೌಡನ ಪೂರ್ವಾಪೇಕ್ಷೆಯ ಆಶ್ರಿತ ನೆಲೆಗೆ ಮಾರಿಕೊಂಡಿದ್ದಾರೆ. ಹಾಗಾದರೆ ಕತೆಯಲ್ಲಿ ಇದಕ್ಕೆ ವಿರುದ್ಧವಾಗಿ ಪಡೆದುಕೊಂಡಿರುವುದೇನು? ಎಂದು ಹೊರಡಲೂ ಸಾಧ್ಯವಿದೆ. ಶ್ರಮಜೀವಿಗಳಾದ ಬೀರ- ಲಕ್ಷ್ಮಿಯರನ್ನು ಗೌಡ ಅನಾಮತ್ತಾಗಿ ಪಡೆದಿದ್ದಾನೆ. ಪರಿಸ್ಥಿತಿಯ ಒತ್ತಡದಿಂದಾಗಿ ಹೆಂಡವೇ ಬೀರನನ್ನು ಬಲಿ ತೆಗೆದುಕೊಂಡಿದೆ. ಕಿಟ್ಟಪ್ಪನು ಲಕ್ಷ್ಮಿ ಪುಟ್ಟಿ ಮುಂತಾದ ಮುಗ್ಧ ಹೆಣ್ಣುಗಳ ಶೀಲವನ್ನು ಬಲಿ ತೆಗೆದುಕೊಂಡಿದ್ದಾನೆ. ತನ್ನ ಮಗನನ್ನು ಅಂಕೆಯಲ್ಲಿಡಬೇಕಾಗಿದ್ದ ಕಿಟ್ಟಪ್ಪನ ತಂದೆ ಗೌಡ, ಇದರಲ್ಲಿ ವಿಫಲನಾಗಿ 'ಮನೆ ಮಾರಿದ್ರೂ ಚಿಂತಿಲ್ಲ ಎಂದ್ರೋ ಹಾಳಾಯ್ತು' ಎಂದು ಕೈ ಚೆಲ್ಲಿ ಕುಳಿತಿದ್ದಾನೆ. ಈ ಮೂಲಕ ದೊಡ್ಡ ಅವಮಾನವನ್ನೇ ಪಡೆದಿದ್ದಾನೆ. ಹೀಗೆ ಆದಿಯಿಂದ ತುದಿಯವರೆಗೆ ಹಿಮ್ಮುಖ - ಮುಮ್ಮುಖವಾಗಿ ಚಲಿಸುವ ಈ ಮಾರುವ -ಪಡೆಯುವ ಪ್ರಕ್ರಿಯೆ ಸಾಮಾಜಿಕ

ಚಲನಶೀಲತೆಯ ತೆಕ್ಕೆಯಲ್ಲಿದೆ ನಿಜ. ಆದರೆ ಲೇಖಕನ ಧೋರಣೆ ಓದುಗನಲ್ಲಿ ಏನನ್ನು ರೂಪಿಸುವುದಕ್ಕೆ ಪ್ರಯತ್ನಿಸುತ್ತಿದೆ ಎಂಬ ಚರ್ಚೆಯಲ್ಲಿ ಕತೆ ತನ್ನ ಮೌಲ್ಯವನ್ನು ಪ್ರಕಟಿಸುತ್ತದೆ.

ಪರಿಣಾಮದ ದೃಷ್ಟಿಯಿಂದ ದಲಿತೇತರ ವಿಮರ್ಶೆ ಈಗಾಗಲೇ ಸ್ಥಾಪಿಸಿರುವಂತೆ, ಕತೆಯ ಕೊನೆಯ ಸಾಲುಗಳು ಮುಖ್ಯವೆನಿಸುವುದೇ ಇಲ್ಲ; ಯಾಕೆಂದರೆ ಒಡಲೊಳಗಿನ ಇಂಥ ಅಸಹಾಯಕತೆ ಕತೆಯ ಆರಂಭದಲ್ಲೇ 'ಹೆಚ್ಚಿಗೆ ಮಾತಾಡೋಕೆ ಅನ್ನ ಹಾಕುವ ಧಣಿ' ಇಂಥ ಸಾಲುಗಳಲ್ಲಿ ಪ್ರಕಟವಾಗಿದೆ. ಹಾಗಾಗಿ ಕೊನೆಯವರೆಗೂ ಪರಿಣಾಮದ ಕುತೂಹಲವನ್ನು ಹಿಡಿದಿಟ್ಟಿದೆ ಎಂದು ಹೇಳಲು ಬರುವುದಿಲ್ಲ.

'ಗ್ರಸ್ತರು' 'ಒಂದು ದಹನದ ಕತೆ' ಮತ್ತು 'ದತ್ತ' -ಇವು ಮೂರು ಕತೆಗಳು, ರಚನೆಯ ಸ್ವರೂಪದ ದೃಷ್ಟಿಯಿಂದ ಒಂದೇ ರೀತಿಯವು. ಪಾತ್ರವೊಂದರ ಅಮೂರ್ತವಾದ ನಾನಾ ಬಗೆಯ ಮಾನಸಿಕ ತುಮುಲುಗಳಿಗೆ ವಸ್ತು ಪ್ರತಿರೂಪವನ್ನು ಕೊಟ್ಟು, ಮೂರ್ತ ರೂಪವನ್ನುಂಟುಮಾಡುವ ತಂತ್ರದ ಅಭಿವ್ಯಕ್ತಿಯ ಆವರಣದೊಳಗೆ ಈ ಮೂರು ಕತೆಗಳು ಬಿಚ್ಚಿಕೊಳ್ಳುತ್ತವೆ. ಭೂತಕಾಲದ ಸಂಗತಿಯನ್ನು ವರ್ತಮಾನದ ಸನ್ನಿವೇಶದೊಂದಿಗೆ ಬೆಸೆಯುವ ತಂತ್ರವು ಇಲ್ಲಿ ಅಸ್ಪಷ್ಟವೂ ಗೊಂದಲಮಯವೂ ಆಗಿರುವುದರಿಂದ ಓದುಗರಿಗೆ ಒಂದು ರೀತಿಯಲ್ಲಿ ತೊಡಕೇ ಆಗುತ್ತದೆ.

'ಗ್ರಸ್ತರು' ಕತೆಯ ನಾಯಕನಿಗೆ ಹೆಸರಿಲ್ಲ. ತನ್ನ ಸುತ್ತಲ ವಾತಾವರಣದಿಂದ ನಿರ್ಮಾಣವಾಗಿರುವ ಭಯದಿಂದ ಕತೆಯು ಆರಂಭವಾಗುತ್ತದೆ. ಇಲ್ಲಿಯ ಇಡೀ ಸಮಸ್ಯೆಯನ್ನು ನಾಯಕನ ದೃಷ್ಟಿಕೋನದಿಂದಲೇ ನೋಡಿರುವ ತಂತ್ರವಿದೆ. ಕೆಳಜಾತಿಯವನಾದ ಈತ ಓದಿ, ನೌಕರಿ ಪಡೆದು, ತನ್ನ ಸಂಸ್ಕೃತಿಯಿಂದಲೇ ಬೇರ್ಪಟ್ಟಿದ್ದಾನೆ. ತನ್ನ ಅವ್ವ, ದೊಡ್ಡವ್ವ, ಗೌಡ, ಮೇಲ್ಜಾತಿಯ ಹೆಣ್ಣು, ನೌಕರಿ ಈ ಸಂಬಂಧಗಳ ಚೌಕಟ್ಟಿನಲ್ಲಿ ಕತೆಯ ವಿವರಗಳು ಮೈದಾಳಿವೆ. ಈ ಸಂಬಂಧಗಳು ನಿರೀಕ್ಷಿತ ಫಲ ಕೊಡದೆ ನಕಾರಾತ್ಮಕವಾಗಿ ಪರಿಣಮಿಸುತ್ತವೆ. ಇಂಥದರಿಂದ ಬದುಕಿನಲ್ಲಿ ಭರವಸೆಯನ್ನು ಕಳೆದುಕೊಂಡು ಹತಾಶನಾದ ಗ್ರಸ್ತ ಸ್ಥಿತಿಯನ್ನು ಕತೆ ಹೇಳುತ್ತಿರುವಂತಿದೆ.

ಇಂಥ ಸ್ಥಿತಿಯೊಂದು ನಿರ್ಮಾಣವಾಗಿದ್ದರೆ, ಅದಕ್ಕೆ ನಮ್ಮ ಸಮಾಜದ ಕೆಳರಚನೆಯಲ್ಲಿರುವ ಮೂಲಭೂತ ಕಾರಣಗಳೇನು? ಎಂಬ ಅರ್ಥಪೂರ್ಣ ಶೋಧನೆಯೂ ಕತೆಯೊಳಗೆ ನಡೆಯುತ್ತದೆ. ಅಥವಾ ಚಲನಶೀಲ ಸಮಾಜದ ಒಂದು ಹಂತದಲ್ಲಿ ಇಂಥ ಒಂದು ಸ್ಥಿತಿ, ಸಮಾಜದ ಯಾವುದೋ ಸ್ತರದ ವ್ಯಕ್ತಿಯನ್ನು ಕಾಡಿಸಬಲ್ಲದೆಂದೂ ಅರ್ಥೈಸಲು ಅವಕಾಶವಿದೆ.

ಮೇಲಿನ ಸ್ತರದ ಸಂಬಂಧದ ಪರಿಣಾಮಗಳ ಫಲಿತವು, ಕೆಳಸ್ತರದ ಮೇಲೆ ದುಷ್ಪರಿಣಾಮ ಉಂಟುಮಾಡುವುದು ಸಮಾಜದ ದುರಂತ ಎನ್ನಬಹುದು. ಆದರೆ ಇದಕ್ಕೆ ಮುಖಾಮುಖಿಯಾಗಿ ಎದೆಯೊಡ್ಡಿ ನಿಲ್ಲಬಲ್ಲ ಸಾಮರ್ಥ್ಯವುಳ್ಳ ದಲಿತ ಯುವ

ಜನಾಂಗದ ಪ್ರತಿನಿಧಿ ಎನ್ನಬಹುದಾದ ಇಲ್ಲಿಯ ನಾಯಕನನ್ನು ಗ್ರಸ್ತ ರೂಪದಲ್ಲಿ ಚಿತ್ರಿಸಿರುವುದು ಮತ್ತೊಂದು ದುರಂತವೆನ್ನದೆ ಬೇರೆ ಮಾರ್ಗವಿಲ್ಲ.

ಇಲ್ಲಿಯ ನಾಯಕನ ನೌಕರಿಯ ಹಿಂದೆ ಗೌಡನ ಋಣವಿದೆ. ಜೊತೆಗೆ ಸಾಲ ಬೇರೆ. ನೌಕರಿಯಲ್ಲಿರುವ ನಾಯಕ ಧರ್ಮ ಕರ್ಮ ಮಠಗಳನ್ನು ಖಂಡಿಸುತ್ತಾನೆ. ಪರಿಣಾಮವಾಗಿ ನೌಕರಿಯನ್ನು ಕಳೆದುಕೊಳ್ಳುತ್ತಾನೆ. ಮನೆಯಲ್ಲಿರುವ ಆಸ್ತಿಯನ್ನು ನಂಬಿಕೊಂಡು ಬಂದರೆ, ಅದು ಸಾಲ ಕೊಟ್ಟಿರುವ ಗೌಡನ ಸ್ವಾಮ್ಯಕ್ಕೆ ಸೇರುವ ಸ್ಥಿತಿಯಲ್ಲಿದೆ. ಗೌಡನಲ್ಲಿ ನಿವೇದಿಸಿಕೊಂಡರೂ ಫಲ ಕಾಣುವುದಿಲ್ಲ. ಪ್ರೀತಿಸಿದ ಹುಡುಗಿ ಮೇಲ್ಜಾತಿಯವಳಾದುದರಿಂದ ಮದುವೆಯ ಮಾತು ದೂರವೇ ಉಳಿಯಿತು. ಆದರೆ ಈ ಸಂಬಂಧ ಗುಲ್ಲಾಗದಂತೆ ಗುಪ್ತವಾಗಿರಬೇಕೆಂಬುದೇ ಆಕೆಯ ನಿಲುವು. ಆದರೂ ಇದರ ಸುಳಿವು ಯಾವುದೋ ಮೂಲದಿಂದ ನಾಯಕನ ದೊಡ್ಡವ್ವನಿಗೆ ತಿಳಿದಿದೆ. ಅದರಿಂದಲೇ ಆಕೆ "ನಂಗೊತ್ತು ಆಗದಿದ್ದನ್ನೆಲ್ಲ ಕಟ್ಕೊಂಡು ಕೊರಗ್ತೀಯಾ" ಎಂದು ಉಪದೇಶಿಸುತ್ತಾಳೆ. ಇದು ಈ ಇಬ್ಬರ ಸಾಮಾಜಿಕ ಪ್ರಜ್ಞೆಯನ್ನು ಒಮ್ಮೆಗೇ ದಾಖಲಿಸುತ್ತದೆ.

ಗೌಡನು, ಇಲ್ಲಿಯ ನಾಯಕನಿಗೆ ನೌಕರಿ ಕೊಡಿಸುವ ನೆಪದಲ್ಲಿ ಇವರ ಆಸ್ತಿಯನ್ನು ಕಬಳಿಸುವ ಹುನ್ನಾರ ನಡೆಸಿರುವಂತಿದೆ. ಮಾತ್ರವಲ್ಲ, "ಕೆಲ್ಸ ಕೊಡಿಸಿದವರ ಮಾನ ಏನಾಗಬೇಕು" ಎಂದು ಅವರದೇ ನಗು ತಂದುಕೊಳ್ಳುವುದು ಈ ಸಂಬಂಧದಲ್ಲಿ ಗೌಡನ ಪಾತ್ರವನ್ನು ಶಂಕಿಸುವಂತೆ ಮಾಡದಿರದು. ಇದು ಜಮೀನ್ದಾರನ ಲಕ್ಷಣವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಈ ಸೂಕ್ಷ್ಮ ನಾಯಕನ ತಾಯಿಗೆ ಇರುವಂತಿಲ್ಲ. ಆದರೆ ಈ ಬಗ್ಗೆ ನಾಯಕ ಪ್ರತಿಭಟಿಸುತ್ತಾನೆ; ಆದರೆ ಪರ್ಯಾಯ ತಿಳಿಯದೆ ಅಸಹಾಯಕನಾಗುತ್ತಾನೆ. ಇಂಥ ಅಸಹಾಯಕತೆಯನ್ನು ಚಿತ್ರಿಸಿರುವ 'ದಲಿತ ಪ್ರಜ್ಞೆ' ಎಂದೆನ್ನಲಾಗವ ಲೇಖಕರ ಧೋರಣೆಯನ್ನು ಸಮಕಾಲೀನ ಅನಿವಾರ್ಯತೆಯು ಪ್ರಶ್ನೆ ಮಾಡುತ್ತದೆ. ತಾಯಿಗೆ ಏನಿದ್ದರೂ ಗೌಡನ ಮೇಲೆ ಗೌರವ ಅಭಿಮಾನ. ಎಷ್ಟಾದರೂ ಅವರು ಊರಿಗೆ ದೊಡ್ಡೋರು ಎಂಬ ಭಾವ. ಇದರಿಂದಲೇ ಮಗ ಅವರಲ್ಲಿ ಮಾತನಾಡಿದ್ದೂ ಅವಳಿಗೆ ಹಿಡಿಸದೆ ಕ್ಷಮೆ ಕೇಳಬೇಕೆಂದೂ ಮಗನನ್ನು ಒತ್ತಾಯಿಸುತ್ತಾಳೆ. ಮಗ ಒಪ್ಪದಿದ್ದಾಗ ನಾನೇ ಕೇಳುತ್ತೇನೆ ಎಂದು ಮುಂದಾಗುತ್ತಾಳೆ. ಮಗನು ಬಲವಾಗಿ "ಯಾರೂ ಕೇಳುವುದು ಬೇಕಾಗಿಲ್ಲ" ಎಂದು ಖಡಾಖಂಡಿತವಾಗಿ ಹೇಳಿದಾಗ ಭಯದಿಂದ "ಹೀಗೆಂದ್ರೆ ನಾವು ಬದ್ಕೋದು" ಎಂದು ಚೀರುತ್ತಾಳೆ. ಅದಕ್ಕೆ ಈತ "ಹಾಗಾದ್ರೆ ಈಗ ನಾವು ಬದ್ಕಿದ್ದೀವಾ?" ಎಂದು ಪ್ರಶ್ನಿಸುತ್ತಾನೆ. ಈ ಧ್ವನಿ ಇಡೀ ದಲಿತ ಲೋಕವನ್ನು ಆವರಿಸುವಷ್ಟು ಅರ್ಥವುಳ್ಳದ್ದು.

ತನ್ನ ನಿರೀಕ್ಷೆಯ ಆದರ್ಶ ಕೈಗೂಡದ ನಾಯಕನಿಗೆ ಈಗಿರುವ ಸ್ಥಿತಿ ತ್ಯಾಜ್ಯವೆನಿಸಿಬಿಟ್ಟಿದೆ. ಎಲ್ಲಾ ದಿಕ್ಕುಗಳಲ್ಲಿಯೂ ಕೈಕಟ್ಟಿದಂತಾಗಿದೆ. ಪರ್ಯಾಯವಿಲ್ಲ. ಪರಿಣಾಮವಾಗಿ ಗ್ರಸ್ತನಾಗಿದ್ದಾನೆ.

ತನ್ನ ಅಜ್ಜಿಯ ಹೆಣವನ್ನು ಮನೆ ಅಂಗಳದಲ್ಲಿ ತಾನೊಬ್ಬನೇ ಸುಡುವ, ಬದುಕಿನಲ್ಲಿ ತೀರಾ ಅಸಹಜವೆನಿಸುವ, ವಿಚಿತ್ರ ಸನ್ನಿವೇಶವನ್ನು 'ಒಂದು ದಹನದ ಕತೆ'ಯು ಚಿತ್ರಿಸುತ್ತದೆ. ಇದನ್ನು ಸಾಹಸಪಟ್ಟು ಸಾಧಿಸಲು ಪೂರಕವಾದ ಅಂಶಗಳನ್ನು, ಜಾತಿ ಸಮಾಜ, ಊರಿನ ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ತೆಗೆದುಕೊಳ್ಳಲಾಗಿದೆ.

ಕೆಳಜಾತಿಯ ಯುವಕನೊಬ್ಬ ಮೇಲ್ಜಾತಿಯ ಕಮಲಿ ಎಂಬ ಹುಡುಗಿಯನ್ನು ಪ್ರೇಮಿಸಿದ್ದಾನೆ. ನಗರದಲ್ಲಿರುವಾತನಿಗೆ ಕೆಲಸ ಸಿಕ್ಕಿದ ಸಂಭ್ರಮ, ಇದರಿಂದ ಊರಿಗೆ ಬಂದರೆ, ಕಮಲಿ ಬಸುರಿಯಾಗಿದ್ದಾಳೆ. ಇದಕ್ಕೆ ಪಂಚಾಯ್ತಿ ನಡೆಯುತ್ತಿದೆ. ಈ ಕಾರಣಕ್ಕೆ ಮನೆಯವರು ಸರಿಯಾಗಿ ಮಾತನಾಡಿಸುವುದಿಲ್ಲ. ಆಗ 'ಏನಾಗಿದೆ ನಿಮಗೆಲ್ಲಾ' ಎಂದು ಕೂಗಾಡುತ್ತಾನೆ.

ಮೇಲುಜಾತಿಯವರು ಕಮಲಿಯನ್ನು ಈ ಯುವಕನಿಗೆ ಕಟ್ಟಲು ಸಿದ್ಧರಿಲ್ಲ. ಹಾಗಾಗಿ ಈತನ ದೊಡ್ಡಪ್ಪ ಎಲ್ಲಾ ಸೇರಿ ಅವರ ಜಾತಿಯಲ್ಲೇ ಒಬ್ಬನಿಗೆ ಒಪ್ಪಿಸುತ್ತಾರೆ. ಇವರಿಂದ ೨೦೦ ರೂ. ಪಡೆಯಲಾಗುತ್ತದೆ. ಹೀಗಾದ ನಂತರ ಈತ ರಾತ್ರಿ ಕಮಲಿಯನ್ನು ಕರೆದುಕೊಂಡು ನಗರಕ್ಕೆ ಹೋಗುತ್ತಾನೆ. ಮದುವೆಯಾಗದಿದ್ದುದು ಹಟ್ಟಿಗೆ ಕಳಂಕವಾದರೆ ತನಗೆ ಈ ಕ್ರಮವೇ ಸರಿಯೆಂದು ಸಮರ್ಥಿಸಿಕೊಳ್ಳುತ್ತಾನೆ.

ತನ್ನನ್ನು ಪಟ್ಟಣಕ್ಕೆ ಕರೆದುಕೊಂಡು ಹೋಗೆಂದು ಅಜ್ಜಿಯಿಂದ ಪತ್ರ ಬರುತ್ತದೆ. ಅದರ ಪ್ರಕಾರ ಊರಿಗೆ ಬಂದರೆ ಊರೇ ಮುನಿಸಿಕೊಂಡಿರುತ್ತದೆ. ಅಜ್ಜಿಯನ್ನು ಕರೆದುಕೊಂಡು ಹೋಗುತ್ತಾನೆ. ಅಜ್ಜಿ ೧೨ ವರ್ಷಗಳ ಕಾಲ ಈತನ ಜೊತೆಯಲ್ಲಿರುತ್ತಾಳೆ. ಸಾಯೋ ಕಾಲದಲ್ಲಿ ಮನೆಗೆ ಕಳಿಸುವಂತೆ ಕೇಳುತ್ತಾಳೆ. ಇದು ಈ ವಯಸ್ಸಿನವರ ಮನೋಧರ್ಮದ ವಾಸ್ತವವನ್ನು ಹೇಳುತ್ತದೆ. ಅಜ್ಜಿಯ ಆಸೆಯಂತೆ ಊರಿಗೆ ಕರೆದುಕೊಂಡು ಬರುವಾಗ ಮಧ್ಯದಲ್ಲಿಯೇ ಅಜ್ಜಿ ಸಾಯುತ್ತಾಳೆ. ಕತೆಯ ನಾಯಕನಿಗೆ ಊರಿನ ಚಕ್ರ ಚಿಕ್ಕಣ್ಣನೊಂದಿಗೂ ತನ್ನ ಪರಿಚಯ ಮಾಡಿಕೊಳ್ಳಬೇಕಾದ ಪರಿಸ್ಥಿತಿ. ಅವನಿಂದಲೇ ದೊಡ್ಡಪ್ಪನಿಗೆ ಸುದ್ದಿ ಹೋಗುತ್ತದೆ; ಮತ್ತೆ ನ್ಯಾಯ ನಡೆಯುತ್ತದೆ. ಯಜಮಾನ ಸಿದ್ಧಪ್ಪ ಬಂದು ತನ್ನ ಪ್ರಯತ್ನ ವಿಫಲವಾದುದನ್ನು, ದೊಡ್ಡಪ್ಪ ಪ್ರಯತ್ನಿಸದಿದ್ದುದನ್ನು ತಿಳಿಸುತ್ತಾನೆ. ಆಗ "ಮನುಷ್ಯರಾ ನೀವು ? ತೊಲಗಿ ಇಲ್ಲಿಂದ" ಎಂದು ಚೀರುತ್ತಾನೆ. ಸಿದ್ಧಪ್ಪ "ತೊಲಗುವುದು ಯಾರ?" ಎಂದು ಹೇಳಿ ತನ್ನ ದಾರಿ ಒಡಿಯುತ್ತಾನೆ. ಈ ಪರಿಸ್ಥಿಯಲ್ಲಿ ಆತ ಗಳುಗಳನ್ನು ಸೇರಿಸಿ, ಅಂಗಳದಲ್ಲೇ ಹೆಣಕ್ಕೆ ಬೆಂಕಿ ಇಕ್ಕಿ ಆವರಿಸಿದ ಭಯದಿಂದ ಅಲ್ಲಿಂದ ಓಡಿಹೋಗುತ್ತಾನೆ.

ಮೊದಲ ಸಲ ಮನೆಗೆ ಬಂದಾಗ ಇದ್ದ ದೊಡ್ಡವ್ವ, ಅಕ್ಕ, ನಾಗಿ ಇವರೆಲ್ಲ ಈತ ಎರಡನೇ ಬಾರಿ ಮನೆಗೆ ಬಂದಾಗ ಎಲ್ಲಿದ್ದರು? ಎಲ್ಲಿ ಹೋದರು? ಏನಾದರು? ಕತೆಯೊಳಗಡೆ ಒಂದೂ ತಿಳಿಯುವುದಿಲ್ಲ. ಈ ಮಿತಿಗಳು ಕಲಾತ್ಮಕತೆಯ ವೈಫಲೀಕರಣದಿಂದಾಗಿ ಕಥೆಯಲ್ಲಿ ವ್ಯಕ್ತವಾಗುವುದಿಲ್ಲ.

ವಸ್ತುವಿಗೆ ತಕ್ಕ ಸನ್ನಿವೇಶ ರಚನೆ, ಸಂಭಾಷಣೆಯಲ್ಲಿ ಭಾಷೆಯ ಏರಿಳಿತಗಳ ಮೂಲಕವೇ ದಟ್ಟವಾದ ಭಾವ ನಿರ್ಮಾಣ, ಸಣ್ಣ ಸಣ್ಣ ವಿರವಗಳನ್ನೂ ಕಣ್ಣಿಗೆ ಕಟ್ಟುವಂತೆ ವಿವರಿಸುವ ರೀತಿ ಇವು ಈ ಕತೆಯನ್ನು ನಡೆಸಿರುವ ಪ್ರಧಾನ ಅಂಶಗಳಾಗಿವೆ.

'ದತ್ತ' ಕತೆಯ ನಾಯಕ ಆನಂದು; ಈತನನ್ನು ಹುಟ್ಟಿದ ಏಳು ವರ್ಷದಲ್ಲಿ ದತ್ತು ಕೊಡಲಾಗಿದೆ. ಹನ್ನೆರಡು ವರ್ಷದ ನಂತರ ಸ್ವಂತ ಮನೆಗೆ ಬರುತ್ತಾನೆ. ಆಗ ಈತನನ್ನು ಒಪ್ಪಿಸಿ ಮದುವೆ ಮಾಡುವುದರ ಮೂಲಕ ಮತ್ತೆ ದತ್ತು ಕೊಡುವ ಹುನ್ನಾರ ನಡೆಯುತ್ತದೆ. ಈ ಚೌಕಟ್ಟಿನಲ್ಲಿ ಕತೆಯ ವಿವರಗಳಿವೆ.

ಒಂದು ಕಡೆ ದತ್ತು ಪಡೆದ ತಾಯಿ - ತಂದೆ, ಮತ್ತೊಂದು ಕಡೆ ಸ್ವಂತ ತಾಯಿ - ತಂದೆ, ತಮ್ಮ, ತಂಗಿ, ಸ್ವಂತ ಊರು. ನಾಯಕ ಆನಂದುವಿಗೆ ಈ ಸಂಬಂಧಗಳ ನೆಲೆಯಲ್ಲಿ ಶೈಥಿಲ್ಯತೆ ಕಾಡಿ, ಇದರಿಂದುಂಟಾಗುವ ಗಾಢ ಸೂಕ್ಷ್ಮ ಪರಿಣಾಮಗಳು ಕತೆಯಲ್ಲಿ ಸಶಕ್ತವಾಗಿ ದಾಖಲಾಗಿವೆ.

ಆನಂದು ಸಾಕಿದ ತಂದೆಯ ಸಾವಿನ ತಿಥಿಯನ್ನು ಮಾಡದಿದ್ದುದಕ್ಕೆ ಸಾಕಿದ ತಾಯಿಗೆ ಸಿಟ್ಟು, ಯಾಕೆ ಮಾಡಲಿಲ್ಲ ಎಂದರೆ ಈತನ ಜಡ ಸ್ವಭಾವವೇ ಎನ್ನಬಹುದು. ಇಂಥ ತಿಥಿ ಮಾಡದವನಿಗೆ ತನ್ನ ಸ್ವಂತ ಮನೆಗೆ ಬರುವಾಗ, ಮಾರಿಗುಡಿಯ ಮುಂದೆ ಎಣ್ಣೆಯಲ್ಲಿ ಮುಖ ನೋಡಿಸುವುದು ಬರೀ ಮೋಡಿ ಎನಿಸುತ್ತದೆ. ಆದರೆ ಇದು ಜನರ ನಂಬಿಕೆಯಲ್ಲಿರುವ ಗಾಢ ಶ್ರದ್ಧೆಯನ್ನು ಪ್ರಕಟಿಸುತ್ತದೆ. 'ಹೆತ್ತ ಸಂಬಂಧಕ್ಕೆ ಅರ್ಥವೇ ಇಲ್ಲ' ಅಂದುಕೊಂಡು ಬಂದ ಆನಂದುವಿಗೆ ಇಲ್ಲಿ ಅರ್ಥವಿಲ್ಲದುದರ ಅನುಭವ ಆಗುತ್ತದೆ. ಮಗ ಬಂದ ಸಂಭ್ರಮಕ್ಕೆ ಇಡೀ ಹಟ್ಟಿ ಗುಸು ಗುಸು. ಅಪ್ಪ ಅವ್ವಗೆ ಗೆಲುಗೆಲು. ಆನಂದುವಿಗೆ ದಿಗಿಲು.

ಸಾಲದ ಹೊರೆ ಹೊತ್ತಿರುವ ತಂದೆ, ಮಗನ ಮದುವೆಯ ಮೂಲಕ ಆ ಭಾರವನ್ನು ಹಗುರಮಾಡಿಕೊಳ್ಳುವ ಹುನ್ನಾರ ನಡೆಸಿದ್ದಾನೆ. ಹೆಣ್ಣು ಕೊಡಲಿರುವವರ ಶ್ರೀಮಂತಿಕೆಯನ್ನು ವಿವರಿಸಿ, ಚಿನ್ನದಂಥ ಒಬ್ಬಳೇ ಮಗಳು, ದೊಡ್ಡ ಮನಸ್ಸು ಮಾಡಿ ದತ್ತು ತೆಗೆದುಕೊಳ್ಳಲು ಒಪ್ಪಿಕೊಂಡರು ಎಂದು ಅಪ್ಪ ಹೇಳುತ್ತಾನೆ. ಆದರೆ ಈತ ಅದನ್ನು 'ಇದೆಲ್ಲ ಆಗಲ್ಲ' ಎಂದು ವಿರೋಧಿಸುತ್ತಾನೆ.

ಆಸ್ತಿ ಮತ್ತು ಹಣಕ್ಕಾಗಿ ತನ್ನನ್ನು ತನ್ನ ತಂದೆ ಹುಟ್ಟಿಸಿದ ಸಂಬಂಧವನ್ನು ಮರೆತು ಮಾರುತ್ತಿದ್ದಾನೆ ಅನಿಸುತ್ತದೆ, ತಂದೆಯ ಬಗ್ಗೆಯೇ ಅಸಹನೆ ಉಂಟಾಗುತ್ತದೆ. ಈ ಮಣ್ಣಲ್ಲೇ ಹುಟ್ಟಿದ ಥರವಿರುವ ತಮ್ಮ, ಅಪ್ಪನ ವ್ಯವಹಾರ, ಗಪ್ಪಗಿರುವ ತಮ್ಮ, ಅವ್ವನ ಹದ್ದು ಬಸ್ತು, ತಂಗಿಯ ನಗು- ಈ ಯಾವುದು ಇವನಿಗೆ ಹಿಡಿಸುವುದಿಲ್ಲ. ಇವರೆಲ್ಲ ಈ ನೆಲಕ್ಕೆ ಮಾಡಿದವರು ಅನಿಸುತ್ತದೆ. ಊರಿಗೆ ಬಂದು ಕೇವಲ ೯ ದಿನವಾದರೂ ಒಂಬತ್ತು ತಿಂಗಳಂತಾಗುತ್ತದೆ. ಈತನಿಗೆ ನೋಡಿರುವ ಹೆಣ್ಣು ನೀರಿಗೆ ಬಂದಾಗ, ತಂಗಿಯು

ಆಕೆಯನ್ನು ತೋರಿಸುತ್ತಾಳೆ. ಆಗ ಈತ "ನೀನೇ ಇಲ್ಲಿ ಬಾ" ಎನ್ನುತ್ತಾನೆ. 'ನಾನು ನಿಂಗ ಅಣ್ಣ ಅನ್ನಿಸ್ತಾದ?' ಎಂದು ಪ್ರಶ್ನಿಸುತ್ತಾನೆ. "ನೀನು ನಂಗ ಅಣ್ಣಾನೆ ಅಲ್ವಾ?" ಎಂದು ಆಕೆ ನಕ್ಕು ಹೊರಟು ಹೋಗುತ್ತಾಳೆ. ಈ ರಾತ್ರಿ ಈತ "ನಿಮ್ಮ ಮಗ ನಿಮ್ಮ ಪಾಲಿಗೆ ಇಲ್ಲ" ಎಂದು ಪತ್ರ ಬರೆದಿಟ್ಟು ಹೊರಟು ಹೋಗಿರುತ್ತಾನೆ. ಇದನ್ನು ತಮ್ಮ ನೋಡುತ್ತಾನೆ. ತಾಯಿ ಪೆಟ್ಟಿಗೆ ನೋಡಿ "ಹಣ ಮುಟ್ಟಿಲ್ಲ" ಎನ್ನುತ್ತಾಳೆ. "ತಂಗಿಗೆ ಇನ್ನೂ ನಿದ್ದೆ ತಿಳಿದಿರಲಿಲ್ಲ" ಎಂಬ ಅತ್ಯಂತ ನಿಗೂಢ ಧ್ವನಿಯೊಂದಿಗೆ ಕತೆ ಮುಗಿಯುತ್ತದೆ. ರಕ್ತ ಸಂಬಂಧಗಳೂ ಕೂಡ, ಕಲ್ಪನೆಗೂ ಮೀರಿದ ಎಂಥಾ ಸಂಕೀರ್ಣಗಳನ್ನು ಉಂಟುಮಾಡಬಲ್ಲವು ಎಂಬುದರ ಕಲೆ ಇಲ್ಲಿರುವಂತಿದೆ.

'ಗ್ರಸ್ತರು' 'ಒಂದು ದಹನದ ಕತೆ' ಮತ್ತು 'ದತ್ತ' - ಈ ಮೂರನ್ನೂ ಕುರಿತು ಸಮಾನವಾದ ಕೆಲವು ಮಾತುಗಳನ್ನು ಹೇಳಬಹುದು. ಬದುಕನ್ನು ಕುರಿತಾದ ಕೆಲವು ಮೌಲ್ಯ ಅಥವಾ ನಂಬಿಕೆಗೆ ಒಂದು ಹಂತದವರೆಗೆ ಸಾಮುದಾಯಿಕ ಸ್ವರೂಪವಿರುತ್ತದೆ. ಕಾಲದ ಗತಿಯಲ್ಲಿ ಈ ಸಾಮುದಾಯಿಕ ಸ್ವರೂಪವು ತಟಸ್ಥವಾಗದೆ, ತಾನೂ ಚಲನಶೀಲತೆಯನ್ನು ನಿಧಾನಗತಿಯಲ್ಲಾದರೂ ಪಡೆಯುವ ಪರಿಣಾಮ, ವ್ಯಕ್ತಿಗತ ನಂಬಿಕೆ ಅಥವಾ ಮೌಲ್ಯಗಳು ಸೃಷ್ಟಿಯಾಗುತ್ತವೆ. ಈ ವ್ಯಕ್ತಿಕೇಂದ್ರಿತ ಮೌಲ್ಯ ಮತ್ತು ಸಮುದಾಯ ಕೇಂದ್ರಿತ ಮೌಲ್ಯಗಳು ಒಂದು ಹಂತದಲ್ಲಿ ಮುಖಾಮುಖಿಯಾಗುತ್ತವೆ. ಸಂಘರ್ಷಕ್ಕೆ ಇಳಿಯುತ್ತವೆ. ಚಲನಶೀಲತೆಯ ದೀರ್ಘಾವಧಿಯಲ್ಲಿ ಬಿಡಿ ಬಿಡಿಯಾದ ವ್ಯಕ್ತಿಕೇಂದ್ರಿತ ಮೌಲ್ಯಗಳೇ ಪುನಃ ಒಂದು ಸಮೂಹ ಕೇಂದ್ರಿತ ಸ್ವರೂಪವನ್ನು ಪಡೆಯಲೂ ಸಾಧ್ಯ. ಹಾಗಾಗಿ ಈ ವ್ಯಕ್ತಿಕೇಂದ್ರಿತ ಮೌಲ್ಯಕ್ಕೆ ಸಮುದಾಯ ಮೌಲ್ಯದೊಡನೆ ಘರ್ಷಿಸಿ ಗೆಲ್ಲುವ ಸಾಮರ್ಥ್ಯ ತಕ್ಷಣಕ್ಕೆ ಕಡಿಮೆ ಇರಬಹುದು. ಇಲ್ಲದೆಯೂ ಇರಬಹುದು. ಆದರೆ ಪಲಾಯನವಾದಿತನವಾಗಲಿ, ಸೋಲೊಪ್ಪುವ ಹತಾಶೆಯಾಗಲಿ ಇರಲು ಸಾಧ್ಯವೇ ಇಲ್ಲ. ತೀರಾ ಆಂಶಿಕವಾಗಿ ಇದ್ದರೂ ಒಟ್ಟು ಪ್ರವಾಹದೊಳಗೆ ಅದು ಮುಖ್ಯವೆನಿಸುವುದಿಲ್ಲ. ಮತ್ತು ಗಂಭೀರವಾಗಿ ಅದನ್ನು ಪರಿಗಣಿಸಲೂ ಬೇಕಿಲ್ಲ.

ಆದರೆ ಮಹಾದೇವರ ಈ ಮೂರು ಕತೆಗಳೂ ಕೂಡ, ಚರಿತ್ರೆಯ ಗತಿಯಲ್ಲಿ ಅಮುಖ್ಯವೆನಿಸಬಹುದಾದ ಅಂಶಗಳನ್ನೇ ಪ್ರಧಾನವಾಗಿಸಿಕೊಂಡಿರುವುದರಿಂದ, ಈ ಕತೆಗಳಿಗೆ ಸಮಕಾಲೀನತೆಯಾಗಲಿ, ಇದರ ಬಹುಮುಖ ಆಯಾಮಗಳಾಗಲಿ ವಾಸ್ತವದಲ್ಲಿ ದಕ್ಕುವುದೇ ಇಲ್ಲ; ಮತ್ತು ಹತಾಶೆ, ಪಲಾಯನವಾದಿತನಗಳಿಗೆ ಬಲಿಯಾಗುವ ಈ ವ್ಯಕ್ತಿ ಕೇಂದ್ರಿತ ಮೌಲ್ಯಗಳು ಬದುಕುಳಿಯುವ ಸಾಮರ್ಥ್ಯವನ್ನು ಪ್ರಕಟಿಸದೆ ಮುರುಟಿಹೋಗುವುದರಿಂದ ತಾಟಸ್ಥ ಮೌಲ್ಯದ ಸಮರ್ಥ ಪ್ರತಿಪಾದನೆ ಆದಂತಾಯಿತೇ ಹೊರತು, ಚಲನಶೀಲತೆಯನ್ನು ಆಂಶಿಕವಾಗಿಯಾದರೂ ಸ್ಪರ್ಶಿಸಿದಂತೆ ಕಾಣುವುದಿಲ್ಲ. ಹಾಗಾಗಿ ಇದೂ ಕೂಡ ತೀರಾ ಆಳದಲ್ಲಿ ಮೂಲಭೂತ ವಾದ ಎನ್ನದೆ ಬೇರೆ ಹೇಳುವಂತಿಲ್ಲ.

ಈ ಮೂರೂ ಕತೆಗಳಲ್ಲಿ ವಸ್ತು - ಸನ್ನಿವೇಶಕ್ಕನುಗುಣವಾದ ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಳ್ಳಲಾಗಿದೆ. ಭಾಷೆಯ ಬಾಗು ಬಳುಕುಗಳೇ ಸಶಕ್ತ ಚಿತ್ರಕ ಶಕ್ತಿಯನ್ನು ಪಡೆದಿವೆ. ನಿರೂಪಣೆಯು ನಿರೂಪಕ, ಪಾತ್ರ - ಹೀಗೆ ಬದಲಾಗುವಲ್ಲಿ ಮೂಲಭೂತ ತೊಡಕುಗಳಿವೆ. ಮಾತ್ರವಲ್ಲ ಕಾಲವನ್ನು ಬೆಸೆಯುವಲ್ಲಿಯೂ ಗೊಂದಲವಿದೆ. ರಚನೆಯ ಈ ದೌರ್ಬಲ್ಯಗಳೇ ಕೆಲವರಿಗೆ ಸದ್ಯಕ್ಕೆ ಮೌಲ್ಯವಾಗಿ ಕಂಡಂತಿವೆ. ಇನ್ನು ಇದರಲ್ಲಿರುವ 'ಡಾಂಬರು ಬಂದುದು' ಕಥೆಯು ಬದಲಾಗುತ್ತಿರುವ ಗ್ರಾಮ ಜೀವನದಲ್ಲಿ ಏರ್ಪಡುತ್ತಿರುವ ಮಾನವಸಂಬಂಧಗಳನ್ನು, ಬದುಕಿನ ಮಾರ್ಪಾಟುಗಳನ್ನು, ನಾನಾ ಸ್ತರಗಳ, ನಾನಾ ದೃಷ್ಟಿಕೋನಗಳಲ್ಲಿ ನೋಡಲು ಒತ್ತಾಯಿಸುತ್ತಿರುವಂತಿದೆ. ಹಿರಿಯ ತಲೆಮಾರು, ಪಟೇಲಿಕೆ, ದುಡಿಯುವ ಜನ, ಶಿಕ್ಷಣದಿಂದ ಕಲಿತ ತಿಳುವಳಿಕೆ, ಸಮೂಹ ಮಾಧ್ಯಮ, ಪೋಲೀಸ್ ವ್ಯವಸ್ಥೆ, ದುಡಿಯುವ ಹಳ್ಳಿ ಹೆಂಗಸರು, ಶಾಲೆಯ ಮಕ್ಕಳು - ಹೀಗೆ ನಾನಾ ಮಗ್ಗುಲುಗಳಿಂದ ಮೂಡುವ ದೃಷ್ಟಿಕೋನಗಳ ಮುಖಾಮುಖಿ, ಸಂಘರ್ಷ ಇವುಗಳ ಫಲಿತ ಪರಿಣಾಮಗಳನ್ನು ಸಶಕ್ತವಾಗಿ ಚಿತ್ರಿಸಲಾಗಿದೆ. ಸರ್ಕಾರಿ ಸೌಲತ್ತುಗಳ ನ್ಯಾಯಯುತ ಸದುಪಯೋಗದ ದ್ವಿಮುಖ ನೆಲೆಯಿಂದ ಆರಂಭವಾಗುವ ಕತೆಯಲ್ಲಿ 'ನ್ಯಾಯ'ದ ಪರಿಕಲ್ಪನೆಯನ್ನು ಬೇರೆ ಬೇರೆ ಅವಸ್ಥೆಗಳು ಅರ್ಥೈಸಲು ಪ್ರಯತ್ನಿಸುತ್ತವೆ.

ಎಸ್ಸೆಲ್ಸಿ ಕಲಿತ ಲಕುಮ, ರಾಜಪ್ಪ, ಮಾಧು, ಶಂಭು - ಇವರ ಸಮಾನ ಮನೋಧರ್ಮವು, ಸೋರಿಹೋಗುತ್ತಿದ್ದ ಸರ್ಕಾರಿ ಸೌಲಭ್ಯವನ್ನು ಪತ್ರಿಕೆಯ ಮೂಲಕ ಸಾರ್ವಜನಿಕ ಗಮನಕ್ಕೆ ತರುವುದು, ಸಂಬಂಧಪಟ್ಟವರಲ್ಲಿ 'ನ್ಯಾಯ'ವನ್ನು ಅಪೇಕ್ಷಿಸುವುದು ಈ ಯುವಕರ ನ್ಯಾಯದ ಪರಿಕಲ್ಪನೆಯಾಗಿದೆ. ಇದಕ್ಕೆ ವಿರುದ್ಧವಾಗಿ ರೋಡಿಗೆ ಮಂಜೂರಾದ ಹಣದಲ್ಲಿ ಉಳಿದುದನ್ನು ಶಾಲೆಯ ನಿರ್ಮಾಣದಂಥ ಕೆಲಸಕ್ಕೆ ವಿನಿಯೋಗಿಸಿದರೆ ಶಿಕ್ಷಣದ ತಿಳುವಳಿಕೆಯಿಂದ ಪ್ರಶ್ನಿಸುತ್ತಾರೆಂಬ ಭಯದಿಂದಲೋ ಏನೋ, ಅದನ್ನು ಜಾತಿ ಮತ್ತು ಅಜ್ಞಾನದ ಕೇಂದ್ರವಾಗಿರುವ ದೇವಸ್ಥಾನದ ರಿಪೇರಿಗೆ ವ್ಯಯಿಸುವ ಹುನ್ನಾರ ನಡೆಸುವುದು, ಇದನ್ನು ಬಹಿರಂಗಗೊಳಿಸಿದವರನ್ನು ಊರ ಪಂಚಾಯ್ತಿಯ ಮೂಲಕ ಶಿಕ್ಷಿಸಲು ಪ್ರಯತ್ನಿಸುವುದು, ಯಾವುದೇ ಮೂಲದಲ್ಲಿಯಾದರೂ ಸರಿ ಈ ಗುಂಪಿನ ತಪ್ಪು ಕಂಡರೆ ಸರಿ, ಬೆತ್ತಲೆಮಾಡಿ ಬಹಿರಂಗವಾಗಿ ಹೊಡೆಯಲೇಬೇಕೆಂದು ಅಪೇಕ್ಷಿಸುವುದು. ಟಾರು ಡಬ್ಬಗಳು ಊರ ಹೊರಗೆ ಹೇಗೋ ಹೋದಾಗ ಅದರ ತಪಾಸಣೆಗೆ ಪೋಲೀಸರ ಮೊರೆ ಹೋಗುವುದು- ಇದು ಜಮೀನ್ದಾರಿ ಪಟೇಲನ 'ನ್ಯಾಯ'ದ ಪರಿಕಲ್ಪನೆ. ಇದಕ್ಕೆ ಪೂರಕವಾಗಿ ಶಾನುಭೋಗ ಮತ್ತು ಕೆಲವು ಹಿರಿಯರ ಮನೋಭಾವಗಳೂ ಕೆಲಸ ಮಾಡುತ್ತವೆ.

ಆದರೆ ರಾಜಪ್ಪ, ಶಂಭು ಇವರ ತಂದೆಯವರದು ತುಸು ಭಿನ್ನ. ಪಟೇಲನು ಅವರಲ್ಲಿ ಮಕ್ಕಳ ಬಗ್ಗೆ ಚಾಡಿ ಹೇಳಿದಾಗಲೂ, ಅವರು ಇವನ ಅಪೇಕ್ಷೆಯನ್ನು

ಈಡೇರಿಸುವುದಿಲ್ಲ. ಊರಲ್ಲಿ ನ್ಯಾಯ ಸೇರಿದಾಗ ಈ ಯುವಕರಿಗೆ ಹೊಡೆಯಿರಿ ಎಂಬ ಗದ್ದಲ ಉಂಟಾದಾಗ ಶಂಭುವಿನ ಅಪ್ಪ "ಬಡೀರಿ ಬನ್ನಿ ಮತ್ತ, ಅದ್ನೂ ನೋಡವು, ನಿಮ್ಮ ಮೂಗ್ನ ನ್ಯಾರಕ ನಿಮ್ಗ ಸರಿ" ಎಂದು ಹೇಳುವ ಧೈರ್ಯದ ಮಾತು ತನ್ನ ಮತ್ತು ಅವರ ನ್ಯಾಯದ ಪರಿಕಲ್ಪನೆಗಳನ್ನು ಏಕಕಾಲಕ್ಕೆ ಪ್ರತ್ಯೇಕಿಸಿ ವ್ಯಾಖ್ಯಾನಿಸುತ್ತದೆ.

ಜಮೀನ್ದಾರಿ ವ್ಯವಸ್ಥೆಯಲ್ಲಿನ 'ನ್ಯಾಯ'ದ ವಿಫಲತೆಯ ಪರಿಣಾಮವಾಗಿ ಇದು ಪ್ರಭುತ್ವದ ಕಡೆಗೆ ಚಲಿಸುತ್ತಿರುವುದಕ್ಕೂ ಪುರಾವೆಗಳಿವೆ. ಹೊಸೂರಿನ ಕಲಕೆತ್ತಿ ಹೆಣ್ಣೊಬ್ಬಳು ಹುಡುಗರನ್ನು ಆಮಿಷಕ್ಕೊಳಪಡಿಸುತ್ತಿದ್ದಳೆಂಬ ಕಾರಣಕ್ಕೆ ಊರ ನ್ಯಾಯದಲ್ಲಿ ಅವಳಿಗೆ ಶಿಕ್ಷೆಯಾಗುತ್ತದೆ. ಆಕೆ ಪೋಲೀಸರಿಗೆ ದೂರು ಕೊಟ್ಟು ತನಗೆ ಶಿಕ್ಷಿಸಿದ ಇದ್ದ ಬದ್ದ ಯಜಮಾನರುಗಳನ್ನು ಪೋಲೀಸ್ ಸ್ಟೇಷನ್ನಿಗೆ ಎಳೆಸಿದಳಂತೆ. ಈ ಸುದ್ದಿಯ, ಸೂಕ್ಷ್ಮ ದಾರಿಯನ್ನು ಪಟೇಲನೂ ಅನುಸರಿಸುತ್ತಾನೆ. ಅಂದರೆ ಜಮೀನ್ದಾರಿ ಮಾದರಿಯ 'ನ್ಯಾಯ'ದ ಪರಿಕಲ್ಪನೆಗೂ 'ಪ್ರಭುತ್ವಮಾದರಿಯ ನ್ಯಾಯ'ದ ಪರಿಕಲ್ಪನೆಗೂ ಇರುವ ಭಿನ್ನತೆಗಳನ್ನು ವ್ಯಕ್ತಪಡಿಸಲು ಕತೆಯ ಈ ಅಂಶಗಳು ಪ್ರಯತ್ನಿಸುತ್ತಿರುವಂತಿವೆ. ಆದರೆ ಆಳದಲ್ಲಿ ಈ ಎರಡೂ ಮಾದರಿಯ ನ್ಯಾಯ ದುಡಿಯುವ ವರ್ಗಕ್ಕೆ ಬೇರೆ ಬೇರೆಯಾಗದೆ ಒಂದೇ ಆಗಿರುತ್ತವೆ. ಅಂತೂ 'ನ್ಯಾಯ'ದ ವಿವಿಧ ಪರಿಕಲ್ಪನೆಗಳನ್ನು ಕಟ್ಟಿಕೊಡುತ್ತಲೇ ಆಯಾಯ ನೆಲೆಗಳಲ್ಲಿ ಅನ್ಯಾಯವನ್ನು ಗುರುತಿಸುತ್ತಿರುವುದರ ವಿವರಗಳೂ ಒಟ್ಟೊಟ್ಟಿಗೆ ಸಿಗುತ್ತವೆ. ಒಂದು ಹಂತಕ್ಕೆ ಅನ್ಯಾಯವನ್ನು ಗುರುತಿಸುವುದು, ಆ ಪ್ರಶ್ನೆ ಬೆಳೆಯುವುದೂ ಕೂಡ ನ್ಯಾಯ ಪಡೆಯಬೇಕಾದುದರ ಮೊದಲ ಹಂತ.

ಡಾಂಬರು ಬಂದುದರಿಂದ ಮತ್ತು ಆ ಬಗೆಯ ಕೆಲಸದಿಂದ ಹಳ್ಳಿಗರಲ್ಲಿ, ಹೆಂಗಸರು ಮಕ್ಕಳಲ್ಲಿ ಮೂಡುವ ಆಶ್ಚರ್ಯ ಕುತೂಹಲದ ಸಂಗತಿಗಳ ವಿವರಗಳು ಸ್ವಾರಸ್ಯಪೂರ್ಣವಾಗಿ ಬಂದಿವೆ. ಟಾರು ಬಂದುದರಿಂದ ಊರಿಗುಂಟಾದ ಪರಿಣಾಮದ ಚಿತ್ರವಂತು ಸಮರ್ಥವಾಗಿ ಬಂದಿದೆ. ಈಗ ಊರ ಮುಂಭಾಗವೇ ಒಂದು ರಣರಂಗವಾಗಿದೆ. ಎತ್ತರಕ್ಕೆ ಬೆಳೆದು ಸೆಟೆದು ನಿಂತಿದ್ದ ಮರಗಳೀಗ ನೆಲ ಕಂಡಿವೆ. ಇವಿಲ್ಲದ ಊರು ಬಿಕೋ ಅನಿಸಿದೆ. ಇವು ಇದ್ದ ಸುಳಿವೂ ಕೂಡ ಇಲ್ಲವಾಗಿದೆ. ಅವು ಇದ್ದಂಥ ಸ್ಥಳದಲ್ಲೀಗ ಮಿಷನ್ನು ಓಡಾಡುತ್ತಿದೆ. ಆಳೆತ್ತರದ ಕಲ್ಲು ಚಕ್ರದ ಮಿಷನ್ನುಗಳು ಹೊಗೆಬಿಟ್ಟು ಓಡಾಡುತ್ತಿವೆ. ಈ ಎಲ್ಲಾ ಚಂದಕ್ಕೆ ಹಳ್ಳಿಯ ಗಂಡಸರು, ಹೆಂಗಸರು, ಮಕ್ಕಳೆನ್ನದೆ ನೋಡುತ್ತಾ ನೋಡುತ್ತಾ ತಮ್ಮನ್ನೇ ಮರೆಯುತ್ತಿವೆ. ಅಲ್ಲಿ ಎದ್ದೇಳುವ ಸದ್ದು ಊರ ಮೀರಿ ಆಚೆಗೂ ಹೋಗುತ್ತದೆ. ದೂರದಿಂದ ನೋಡಿದ ಯಾವ ಮಗನಿಗೂ ಅಲ್ಲೋಲ ಕಲ್ಲೋಲ ಆಗುವಂತೆ ಕಾಣುತ್ತಿದೆ. ಹತ್ತಿರ ಬಂದರೆ ಅದೇ ಊರಿನ ಜನರು. ಈ ವಿವರಣೆಯಿಂದ ಕೆಲವು ಆಲೋಚನೆಗಳನ್ನು ಬೆಳೆಸಬಹುದು. ಕಾಡು ಅಳಿಯುತ್ತಿರುವುದು, ಯಂತ್ರ ಆವರಿಸುತ್ತಿರುವುದು, ಊರು ಸಾಂಸ್ಕೃತಿಕವಾಗಿ ಕಳಾಹೀನವಾಗಿರುವುದು, ಇಡೀ ಊರನ್ನೇ ದಂಗು ಬಡಿಸಿರುವುದು. ಇದರಿಂದ

ಬಿಡಿಸಕೊಳ್ಳದಂತೆ ಬಿಗಿಹಿಡಿದಿರುವುದು. ಇಂಥದು ಒಂದು ಊರಿನ ಸಂಗತಿ ಆಗಿಲ್ಲದಿರುವುದು. ಈ ಹಲವು ಅಂಶಗಳ ನಾನಾ ವಿವರಣೆಗಳ ಸಾಧ್ಯತೆಗಳನ್ನು ಕೆಲವೇ ಮಾತುಗಳಲ್ಲಿ ಮೂಡಿಸುವುದು ದೇವನೂರರಿಗೆ ಮಾತ್ರ ಸಾಧ್ಯವೇನೋ ಎನ್ನುವಷ್ಟರಮಟ್ಟಿಗೆ ಸಶಕ್ತವಾಗಿದೆ.

ಇನ್ನು ಹೆಂಗಸರು - ಮಕ್ಕಳದು ಇನ್ನೊಂದು ಕತೆ. ಹೆಂಗಸರಿಗೆ ಟಾರು, ತೂತು ಮಡಕೆಗೆ ಮೆತ್ತಿ, ಮಡಕೆಗೆ ಮರುಜೀವ ಕೊಡುವ ಸಾಧನವಾದರೆ, ಮಕ್ಕಳಿಗೆ ಟಾರಿನ ಕಪ್ಪು ಬಣ್ಣ, ಮೆದು ರೂಪ ಆಕರ್ಷಕ. ಆಟದ ಸಾಮಗ್ರಿ . ಶಾಲೆ ಬಿಟ್ಟ ಮಕ್ಕಳು ಈ ಆಟದಲ್ಲಿ ತೊಡಗುವುದರಿಂದ ತಂದೆ- ತಾಯಿಗಳಿಗೇ ತಾಪತ್ರಯ. ರಂಗಪ್ಪನ ಮಗ ಒಂದು ಸಂಜೆ ಈ ಆಟಕ್ಕೆ ಹೋಗಿ ಟಾರಿಗೆ ಅಂಟಿಕೊಂಡಿತ್ತು. ಮಾರನೇ ದಿನ, ಊರ ಹೊರಗೆ ಹೋದ ಟಾರು ಡಬ್ಬಗಳ ಮಹಜರಿಗೆ ಬಂದ ಪೋಲೀಸರನ್ನು ಒಳಗೊಂಡು ಊರವರು ಈತನನ್ನು ನೋಡುತ್ತಾರೆ. 'ಹತ್ತಿರದಿಂದ ನೋಡಿದರೆ ಆ ಹೈದನ ಮೈಯೊಳಗೆ ಇನ್ನೂ ಜೀವ ಆಡುತ್ತಿತ್ತು' ಎಂಬ ವಾಕ್ಯದಿಂದ ಕತೆ ಮುಗಿಯುತ್ತದೆ.

'ಮೂಡಲ ಸೀಮೇಲಿ ಕೊಲೆಗಿಲೆ, ಮುಂತಾಗಿ' ಕತೆಯಲ್ಲಿ ಹಸಿವನ್ನು ಪ್ರಧಾನವಾಗಿಸಿಕೊಂಡು, ಅದರ ಹಿನ್ನೆಲೆಯ ಕಾರಣದ ಸಾಧ್ಯತೆಗಳನ್ನು, ಮತ್ತು ಹಸಿವಿನ ಪರಿಣಾಮದ ಮಗ್ಗುಲುಗಳನ್ನು ವರ್ಣ-ವರ್ಗ ಸಮಾಜದ ಹಂದರದಲ್ಲಿಟ್ಟು ವಿವರಿಸಲು ಪ್ರಯತ್ನಿಸಲಾಗಿದೆ. ಹಾಗಾಗಿ ಜಾತಿ ಸಂಬಂಧದ ಸೆಲೆಗಳೂ ಇಲ್ಲಿ ಚರ್ಚೆಗೆ ಒಳಗಾಗುತ್ತವೆ. ಹಾಗೆ ನೋಡಿದರೆ ಹಸಿವು ಶಾಬ್ದಿಕ ಅಭಿವ್ಯಕ್ತಿಗೆ ಸಿಗುತ್ತದೆಯೇ? ಹಸಿವಿನ ಅನುಭವದ ಅನಂತ ತೀವ್ರತೆಗಳು, ಪರಿಣಾಮದ ಗಾಢ ಭೀಕರತೆಗಳು ಹೀಗೆ. ಶಾಬ್ದಿಕ ಅಭಿವ್ಯಕ್ತಿಯ ಕೆಲಸವೇ ಅನುಭವಕ್ಕೆ ರೂಪಕೊಡುವುದು, ಸಂವಹನಿಸುವುದು ಎಂಬ ರೂಢಮೂಲ ವಿಚಾರ ಒತ್ತಟ್ಟಿಗಿರಲಿ. ಇದು ಯಾಕೋ ಏನೊ ವಿಶೇಷವಾಗಿ ಹಸಿವಿಗೇ ಸಂಬಂಧಿಸಿದ್ದು ಅದಕ್ಕಾಗಿಯೇ ಈ ಹಿಂದೆ 'ವಿವರಿಸಲು ಪ್ರಯತ್ನಿಸಲಾಗಿದೆ' ಎಂದು ಉದ್ದೇಶಪೂರ್ವಕವಾಗಿ ಬಳಸಲಾಗಿದೆ. ಇದರಿಂದಾಗಿ ಈ ಕತೆಯಲ್ಲಿ ಹಸಿವು ಕೇವಲ ಒಂದು ನಿಮಿತ್ತ ಮಾತ್ರವಾಗಿದ್ದು, ಬೇರೆ ಅಂಶಗಳೇ ಚರ್ಚೆಗೊಳಗಾಗುತ್ತವೆ. ಈ ಮೇಲೆ ಪ್ರಧಾನವೆಂದುದೇ ಇಲ್ಲಿ ಈಗ ಬರಿಯ ನಿಮಿತ್ತವೆಂದಾಯಿತು.

ಲೇಖಕರು ಬಡತನವನ್ನು ಪರಿಚಯಿಸುವುದು ಹೀಗೆ. "ಸಂಜೆಯ ಸಮಯ ಮಗನ ಕಡೆ ನೋಡುತ್ತಿದ್ದವ ನೋಡುತ್ತಲೆ, ಏನಾರು ಉಣ್ತ ಅಂತಲೆ, ಮಧ್ಯಾಹ್ನದ್ನೆ ತಂಗಳು ಅಂದಳು. ಮಾಡಾಕತಾನೆ ಏನು ಇದ್ದುದು ಅಂತ ಅವಳೇನು ಮೊಖ ಸಿಂಡಿರಿಸಿಕೊಂಡು ಹೇಳಬೇಕಾಗಿರಲಿಲ್ಲ. ಅವ ಬಾಗಲು ಕಡದು ಇರುವ ಆಚಲು ನೋಡಲು ತೊಡಗಿದನು. ಮತ್ತೆ ತಿರುಗಿದಾಗ ತನ್ನ ಕಡೆಗೆ ನೋಡುತ್ತಿದ್ದ ಹೆಂಡತಿ, ತಾನು ಅವಳತ್ತ ನೋಡುತ್ತಲೆ ಎತ್ತಲೋ ಕಣ್ಣು ಕತ್ತು ತಿರುಗಿಸಿದಳು. ಅವ ವಸಿ ಗೌಡರ್ನಾರು ನೋಡ್ಕಂದು ಬತ್ತೀನಿ ಎಂದು ಎದ್ದನು." ಈ ಭಾಗದ 'ಏನಾರು' ಎಂಬ ಶಬ್ದ ಪ್ರಯೋಗದ

ಬಗ್ಗೆ ಎರಡು ಒತ್ತುಗಳಿರಲು ಸಾಧ್ಯ. ಒಂದು, ಮಗ ಊಟ ಮಾಡಲಾರದಂಥ ಸ್ಥಿತಿ. ಮತ್ತೊಂದು, ಊಟವೇ ಇರದ ಅನುಮಾನ. ಇಲ್ಲಿಯದು ಎರಡನೇ ಅಂಶದಿಂದ ಹುಟ್ಟಿರುವಂತಿದೆ. ಉಳಿದಂತೆ ಬೇರೆ ಬೇರೆ ಅಂಶಗಳೂ ಬಂದು ಸೇರಿಕೊಳ್ಳುತ್ತವೆ. ರಂಗಪ್ಪ ಬೀಡಿಗಾಗಿ ಜೋಬನ್ನ ಅತ್ತಗ ಇತ್ತಗ ತಡಕುವುದು, ಬೀಡಿ ಇಲ್ಲದೆ 'ಥುತ್ತೇರಿ' ಅನಿಸುವುದು, ಹೆಂಡತಿಯಾದ ಪಾರೋತಿ ರಾಜನ ಹರಿದ ಚಡ್ಡಿಯನ್ನು ಹೊಲಿಯುವುದು, ಹುಲ್ಲಿನ ಜೋಪಡಿ ಆಕಾಶ ಕಾಣಿಸುವಂತೆ ಧಾರಾಳವಾಗಿ ಅವಕಾಶ ಮಾಡಿಕೊಟ್ಟಿರುವುದು ಹೀಗೆ ವಿಸ್ತರಿಸಿಕೊಳ್ಳುವ ಮುಖಗಳು.

ಬೀರನನ್ನು ಬಡತನದ ಹಸಿವು ಕಾಡುತ್ತಿದೆ. ಇದಕ್ಕೆ ವಿರುದ್ಧವಾದ ಕೆಲವು ಪ್ರಸಂಗಗಳು ಕತೆಯಲ್ಲಿ ಸಿಗುತ್ತವೆ. ಊರಿಗೆ ಊರೇ ಲೈಟು ಬರುವ ಸಂಭ್ರಮದಲ್ಲಿ ಬೀಗುತ್ತಿರುವುದು, ಹೊಸ ಮೇಷ್ಟ್ರ ಕೈಲಿ ಸಿಗರೇಟು ಉರಿಯುತ್ತಿರುವುದು, (ಈತನದು ಬೀಡಿ, ಅದಕ್ಕೂ ಗತಿಯಿಲ್ಲ) ಹೊಳಪು ಹೊಡೆಯುವ ಬಿಳೀ ಬಟ್ಟೆ ಹಾಕಿರುವುದು. (ರಾಜನ ಚಡ್ಡಿ ಹರಿದಿರುವುದು) ಅವರ ತಲೆ ಬಾಚಿಕೊಂಡ ನೇರ ಕೆಡದಿರುವುದು, ಶಾಸ್ತ್ರಿ ಮೇಷ್ಟ್ರು ಈ ಸಲ ಮಳೆ ಬೆಳೆ ಹೇಗನ್ನುತ್ತೆ ಅಂತ ಕೇಳುವುದು, ತಮ್ಮ ಪ್ರಗತಿಯ ವರದಿಯನ್ನು ವಿವರಿಸುವುದು, ಗೌರವ್ವ ಉಟ್ಟಿದ್ದ ಹೊಸ ಗರಿ ಗರಿ ಸೀರೆ ಸರ ಸರ ಶಬ್ದ ಮಾಡುವುದು (ರಾಜನ ಹರಿದ ಚಡ್ಡಿ), ಮೊಳಕೈಯವರೆಗಿನ ಬಳೆ ಜಲ್ಲಂತ ಮಾತಿಗೆ ದನಿ ಕೊಡುವುದು, ನರ್ಸಮ್ಮ ಪುಸ್ತಕ ಹಿಡಿದು ಕುಂತಿರುವುದು, ಶಾರದಮ್ಮನ ಮದುವೆ ಬಗ್ಗೆ ಬೀರನೇ ಕೇಳುವುದು... ಹೀಗೆ.

ಭೂಮಿ ತಾಯಿ ಸೀಳುಕೊಂಡು ಒಂದ್ಸಲಕ ತನ್ನ ಹೊಟ್ಟೆ ಒಳಕ ಎಲ್ಲಾನು ಹಾಕೊಂಡು ಬುಟ್ಟರ ಎಷ್ಟೋ ನೆಮ್ಮದಿ -ಎಂದು ಬೀರ ಅಂದುಕೊಂಡಿರುವುದು, ಸೌದೆ ಒಡೆದು ಸುಸ್ತಾಗಿ ನೆಲದ ಆಶ್ರಯ ಹಿಡಿದು ಗೌರವ್ವ ಕೇಳಿದಾಗ 'ಅದ್ಯಾಕೊ ಆಗಾಕಿಲ್ಲ ಅಳಿ' ಎಂದು ಹೇಳಿದ್ದು, ತಾಯಿ ಹೊಟ್ಟೆ ಒಳಗಿಂದ ಇನ್ನೊಂದ್ಸಲ ಜನ್ಮ ಕಂಡಂಗಾದುದು - ಈ ಎಲ್ಲವೂ ಬೀರನ ಬಡತನ ಹಸಿವು ಇವನ್ನು ಅರ್ಥೈಸಲು ಹೆಣಗಿರುವಂತಿದೆ. ಆದರೆ ಬೀರನ ಹೆಂಡತಿ ಪಾರೋತಿ ಇದಕ್ಕಿಂತ ಭಿನ್ನ. ಜೋಪಡಿಯ ಚಾವಣಿಗೆ ಹುಲ್ಲು ತಂದು ಹಾಕಿ ಎಂದು ಒತ್ತಾಯಿಸುವುದು, ಸಂತೆಯಲ್ಲಿ ಮಗನಿಗೆ ಚಡ್ಡಿ ತನ್ನಿ ಎಂದು ಕೇಳುವುದು, ಬೀರನಲ್ಲಿ ಬೀಡಿಯ ಗ್ಯಾರಂಟಿ ಮಾಡಿಕೊಳ್ಳದೇ ಬೆಂಕಿ ತರುವುದು - ಈ ಅಂಶಗಳಲ್ಲಿ ಬೀರನ ಹಸಿವಿನೊಂದಿಗೆ ಈಕೆ ಎಷ್ಟರ ಮಟ್ಟಿಗೆ ಸ್ಪಂದಿಸಿದ್ದಾಳೆ ಎಂಬ ಪ್ರಶ್ನೆಯನ್ನು ಸೃಷ್ಟಿಸುತ್ತವೆ. ಮಾತ್ರವಲ್ಲ ಕೊನೆಗೂ ತಾಯಿ ಮಗ ಇದರಿಂದ ದೂರವೇ ಉಳಿಯುತ್ತಾರೆ. ಈ ತಂತ್ರದ ಔಚಿತ್ಯ ಮುಖ್ಯವಾಗುತ್ತದೆ. ಬಡತನವನ್ನು, ಅದರ ತೀವ್ರತೆಯನ್ನು, ಒಂದು ಕೌಟುಂಬಿಕ ವಾತಾವರಣದಲ್ಲೇ ವಿವರಿಸಲಾಗದೆ, ಅದನ್ನು ಪಾತ್ರವೊಂದರ ಮೂಲಕ ಹೊರತಂದು, ಬೇರೆ ಬೇರೆಯವರೊಂದಿಗೆ ಹೋಲಿಸಿ ಹೇಳಲು ಪ್ರಯತ್ನಿಸಿದಂತಿದೆ. ಅಂದರೆ ಇದು ತುಲನಾತ್ಮಕ ನೆಲೆಯದೇ ಹೊರತು ಸ್ವಯಂ ಪ್ರೇರಿತ ಪ್ರತ್ಯೇಕ ನೆಲೆಯದೆಂದೆನಿಸುವುದಿಲ್ಲ.

ಉತ್ಪಾದಕನಾದ ಬೀರನ ಶ್ರಮದಿಂದಲೇ ಗೌಡರ ಹಟ್ಟಿ ಕಂಬ ನಿಂತಿರುವುದು ಇಡೀ ಊರಿಗೇ ಗೊತ್ತು. ಆದರೆ ಶ್ರಮಿಕನಿಗೇ ಶ್ರಮದ ಬೆಲೆ ಗೊತ್ತಿಲ್ಲ. ಕೂಲಿ ಬೆಲೆಯ ನಿರ್ಧಾರವೂ ಇವನದಲ್ಲ. ಕೊಟ್ಟದ್ದು ತಂದು ಹೊಟ್ಟೆ ಹೊರೆವ ಪರಿಸ್ಥಿತಿ. ಗೌಡರು ಕಣ್ಣು ಬಿಟ್ಟರೆ ತನ್ನ ಜೀವ ಎಂಬುದು ಬೀರನ ನಂಬಿಕೆ. ಈ ಮುಗ್ಧತೆಯೇ, ತನ್ನ ಹಸಿವಿನಲ್ಲಿಯೂ ಊರೊಟ್ಟಿನ ಕೆಲಸಕ್ಕೆ ಎಳೆದೊಯ್ಯುತ್ತದೆ. ಊಟ ಕೇಳಬಹುದಾದ ಸಂದರ್ಭದಲ್ಲಿ ನೀರು ಕೇಳಿಸುತ್ತದೆ. ಹಸಿವು ಇನ್ನೂ ತೀವ್ರವಾಗಿ ಮಾತನಾಡಲಾರದಂಥ ಸ್ಥಿತಿಯಲ್ಲಿಯೂ ಒಡೆಯಲಾರದ ಕೊರಡಿಗೆ ದೇಹದ ಬಲವನ್ನೆಲ್ಲಾ ಒಟ್ಟಾಗಿಸಿ ಸೌದೆ ಒಡೆಯುವಂತೆ ಮಾಡುತ್ತದೆ. ಹೆಂಡತಿ ಮಕ್ಕಳ ಪಾಡಿರಲಿ, ತನ್ನ ಹೊಟ್ಟೆಗೂ ಕೂಡ ತುತ್ತು ಹಿಟ್ಟು ಕೇಳುವ ಹಕ್ಕನ್ನು ಹತ್ತಿಕ್ಕುತ್ತದೆ. ಸೋತು ಸೊರಗಿ ನೆಲ ಹಿಡಿಯುವಂತೆ ಮಾಡುತ್ತದೆ.

ಶ್ರಮಿಕವರ್ಗದ ಈ ಅಸಹಾಯಕತೆಯೇ ಶೋಷಕರಿಗೆ ಮೌಲ್ಯವಾಗುತ್ತದೆ. ಶ್ರಮ ಜೀವಿವರ್ಗಕ್ಕಿದು ದೌರ್ಬಲ್ಯ. ಸದ್ಯಕ್ಕೆ ದಲಿತೇತರ ವಿಮರ್ಶೆ ಇದನ್ನು ಮೌಲ್ಯವೆಂದೇ ಪರಿಗಣಿಸಿದೆ. ಮತ್ತು ಇದನ್ನು ಉದ್ದೇಶಪೂರ್ವಕವಾಗಿ ಉತ್ಕೃಷ್ಟ ಕಲಾತ್ಮಕತೆ ಎಂದು ವೈಭವೀಕರಿಸಿ ಕೈತೊಳೆದುಕೊಂಡಿದೆ.

ಈ ಕತೆಯ ರಾಜನ ಕನಸು ಮುಖ್ಯವಾಗಿ ಚರ್ಚಿಸಬೇಕಾದುದು. ರಾಜನು ಸಂಜೆ ಹೊತ್ತು, ಮಧ್ಯಾಹ್ನದ ತಂಗಳನ್ನು ಉಂಡು ಮಲಗಿರುತ್ತಾನೆ. ರಾತ್ರಿಯಾಗುತ್ತಾ ಬಂತು. ಇದ್ದಕ್ಕಿದ್ದಂತೆ (ಹೆದರಿ) ಎದ್ದು ಕೂರುತ್ತಾನೆ. "ನೋಡವ್ವ ನೋಡವ್ವ ಪಟೇಲ್ರ ಶಂಭಪ್ಪ ಅವನಲ್ಲ. ಅವ ಅವ ನನ್ನ ರಾಜ ಅನ್ನಕಿಲ್ವಂತೆ. ಶಂಭಪ್ಪ ಇಸ್ಕುಲು ಬುಡ್ತಲೆ ಅಂದ. ನೀವು ವಲಾರ‍್ರು ಕಲಾ. ಅದ್ಕ ನಿನ್ನ ರಾಜ ಅನ್ನಾಕಿಲ್ಲ. ಗೀಜ ಅಂತೀನಿ ಅಂದ" ಎಂದು ಹೇಳುತ್ತಾನೆ. ಶಂಭಪ್ಪ ಹಾಗೆ ಹೇಳುವುದಕ್ಕೂ ಸಾಮಾಜಿಕ ಕಾರಣಗಳಿವೆ.ಇದು ವಾಸ್ತವ ತಾನೆ? ಆದರೆ ಲೇಖಕರು ಈ ಸುಡು ವಾಸ್ತವವನ್ನು ಕನಸಿನ ಲೋಕಕ್ಕೆ ವರ್ಗಾಯಿಸುವುದೇಕೆ? ಅಥವಾ ಕನಸಿನ ಲೋಕದಲ್ಲಿ ಏಕೆ ವಾಸ್ತವವನ್ನು ಚಿತ್ರಿಸ ಬಯಸುತ್ತಾರೆ? ಇದು ಕೇವಲ ಇಲ್ಲಿಯ ವಿಚಾರವಲ್ಲ. ಮತ್ತಿನ ಸ್ಥಿತಿಯಲ್ಲಿ ವಾಸ್ತವವನ್ನು ಪ್ರಕಟಿಸುವುದು (ಬೀರ, ಗಾರಸಿದ್ದಾ್ವ), ವೇಷದ ರೂಪದಲ್ಲಿ ವಾಸ್ತವವನ್ನು ಚಿತ್ರಿಸುವುದು (ಅಮಾಸ). ಈ ಎಲ್ಲವೂ ಏನನ್ನು ಸೂಚಿಸುತ್ತವೆ? ಯಾವುದು ವಾಸ್ತವದಲ್ಲಿ ತೀರಾ ಗಂಭೀರ, ಮುಖ್ಯವಾಗಿರುತ್ತದೆಯೋ ಅದನ್ನೇ ಅಲ್ಲಿಂದ ವರ್ಗಾಯಿಸಿಬಿಡುವುದು. ಇದಕ್ಕೆ ಎರಡು ಉದ್ದೇಶಗಳಿರಲು ಸಾಧ್ಯ. ಒಂದು: ವಾಸ್ತವವನ್ನು ಪ್ರಜ್ಞಾಸ್ಥಿತಿಯಲ್ಲಿ ಎದುರಿಸಲಾರದಂಥ ನಿರ್ವೀರ್ಯತೆ. ಮತ್ತೊಂದು ಇದಕ್ಕೇ ಪೂರಕವಾದ ಪಲಾಯನವಾದ. ಮತ್ತೆ ಈ ಎರಡೂ ಕೂಡ ದಲಿತೇತರ ವಿಮರ್ಶೆಗೆ ಮೌಲ್ಯವಾಗಿಯೇ ಕಾಣುವುದೇಕೆ?

ನೌಕರಿಯ ಕುರಿತು ಕತೆಯಲ್ಲಿ ಎರಡು ಹೊಳವುಗಳು ಸಿಗುತ್ತವೆ. ಕೆಳಜಾತಿಯವನಾದ ಒಬ್ಬ ಹೊಸ ಮೇಷ್ಟ್ರು ಉಡುಪಿನಲ್ಲಿ ಶುಭ್ರವಾಗಿರುವನಲ್ಲದೆ,

ಶಾಸ್ತ್ರಿ ಮೇಷ್ಟ್ರ ಮನೆಯ ಒಳಗೆ ಪ್ರವೇಶವಿದೆ ಮತ್ತು ಆತನಿಗೆ ಮನೆಯವರ ಲೋಟದಲ್ಲೇ ಕುಡಿಯಲು ಕೊಡುತ್ತಾರೆ. ಕೆಳಜಾತಿಯ ರಂಗಪ್ಪ ನೀರು ಕೇಳಿದಾಗ, "ಸ್ವಲ್ಪ ನೀರಂತೆ ರಂಗನಿಗಂತೆ, ಕುಡಿಯಾಕಂತೆ. ಹೀಗೆ ಹಿಡಿದು ಹಿಡಿದು ಶಾಸ್ತ್ರಿ ಮೇಷ್ಟ್ರು ಹೇಳುತ್ತಾರೆ. ನರ್ಸಮ್ಮ ಗೌಡರ ಮನೆಯಲ್ಲಿ ಇರುವವಳಾದರೂ ಬಾಡಿಗೆ ಕೊಡುವಂತಿಲ್ಲ. ಹಳ್ಳಿಯಲ್ಲಿರುವುದರಿಂದ ಕಾಲು ಕಡ್ಡಿ ಕೊಳ್ಳುವಂತಿಲ್ಲ. ಬೇರೆ ಎಷ್ಟೋ ಹೆಣ್ಣು ಮಕ್ಕಳು ಇವಳಂತೆ ಆಗಲು ಪ್ರಯತ್ನಿಸುತ್ತಿದ್ದಾರೆ. ಈ ಅಂಶದಿಂದ ಹೀಗೆ ಗ್ರಹಿಸಬಹುದು. ಹಸಿವನ್ನು ವಿವರಿಸುತ್ತಲೇ ಅದರ ವಿಮೋಚನೆಯ ಹಲವು ದಾರಿಗಳಲ್ಲಿ ಒಂದನ್ನು ಮಾತ್ರ ಸೂಚಿಸುವ ಪ್ರಯತ್ನ.

ಗೌಡರ ವಿಚಾರ ಕತೆಯಲ್ಲಿ ಬಂದಿದ್ದರೂ ಅವರ ಒಳಮುಖಗಳು ತುಂಬಾ ಸೂಕ್ಷ್ಮವಾಗಿವೆ. "ಕಿರುಬನ ಮುಚ್ಚಿ ಗೌಡರ ತೋರಿಸಬಹುದು; ಗೌಡರ ಮುಚ್ಚಿ ಕಿರುಬನ ತೋರಿಸಬಹುದು." ಗೌಡರ ಶೋಷಣೆಯ ಹಲವು ಮಗ್ಗುಲುಗಳಿಗೆ ಇದೊಂದೇ ಸಾಲು ಸಾಕೆನಿಸುವಂತಿದೆ. ಊರಿಗೊಂದು ನರ್ಸು ಬೇಕೆಂದು ಹೋರಾಡಿ ತರುವುದು, ವರ್ಗವಾದುದನ್ನು ವಜಾ ಮಾಡಿಸುವುದು, ಮನೆಯಲ್ಲಿ ಬಾಡಿಗೆಯಿಲ್ಲದೆ ಆಶ್ರಯ ಕೊಡುವುದು, ಅವಳೊಂದಿಗೆ ಚಲ್ಲಾಟವಾಡುವುದು ಹೀಗೆ. ಇಂಥ ಸನ್ನಿವೇಶಗಳನ್ನು ಮೂರನೇ ಪಾತ್ರದೊಂದಿಗೆ ಚಿತ್ರಿಸುವ ಲೇಖಕರ ಕಲೆಗಾರಿಕೆ ಹೆಚ್ಚು ಜಾಣ್ಮೆಯದು. ಹಳ್ಳಿಗಳಲ್ಲಿ ಊರಿನ ಹೆಸರು ಹೇಳಿಕೊಂಡು ಇಂಥ ಗೌಡರು ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವುದು ಹಳೆಯ ವಿಚಾರವೂ ವಾಸ್ತವವೂ ಆದುದೇ ಆಗಿದೆ. 'ಅಮಾಸ' ಮಾರಿಗುಡಿಯ ಜಾತ್ರೆಯೊಂದನ್ನು ಮುಖ್ಯವಾಗಿಟ್ಟುಕೊಂಡು, ದಲಿತ ಬದುಕಿನ ಕೆಲವು ವಿವರಗಳು ಕತೆಯನ್ನು ರಚಿಸಿದೆ. ದಲಿತರ ಕತೆಯಲ್ಲಿರುವ ಅದಮ್ಯ ಚೈತನ್ಯ ಮತ್ತು ಉತ್ಪಾದನಾ ಸಂಬಂಧಿಯಾದ ಸಂಗತಿಗಳು ದಾಖಲಾಗಿವೆ.

ಕತೆ ಶುರುವಾಗುವುದು ಹೀಗೆ: "ಅಮಾಸ ಎಂಬುದು ಅಮಾಸನ ಹೆಸರು." ಇದು ಅಮಾಸನಂಥವರ ಅಸ್ತಿತ್ವಕ್ಕೆ ಬೆಲೆಗಟ್ಟುವ ವಿಧಾನದಂತೆ ಗೋಚರಿಸುತ್ತದೆ. ಅಮಾಸನನ್ನು ಹೆತ್ತವರು ಬದುಕಿಲ್ಲದ ಕಾರಣ, ಮಾರಿಗುಡಿಯ ಆಶ್ರಯದ ಕುರಿಯಯ್ಯನ ಜೊತೆಯಲ್ಲಿ ಬೆಳೆಯುತ್ತಿದ್ದಾನೆ. ಕುರಿಯಯ್ಯ ದುಡಿಯುವಂತಿದ್ದಾಗ, ದುಡಿದು ಶ್ರೀಮಂತರಿಂದ ಸೈ ಎನಿಸಿಕೊಂಡವನು. ಆದರೆ ಇಂದು ಮಾರಿಗುಡಿಗೆ ಮೊರೆಹೋಗಿದ್ದಾನೆ. ಹಾಗಾಗಿ ಅಮಾಸ ಮತ್ತು ಕುರಿಯಯ್ಯನಿಗೆ ಮಠದ ಅನ್ನದಿಂದಲೇ ಜೀವನ ಸಾಗುತ್ತಿದೆ.

ಈ ಕತೆಯಲ್ಲಿನ ತೆಂಗಿನ ಮರ, ಅಮಾಸ, ಅಮಾಸನ ಹುಲಿವೇಷ, ರೈಲ್ವೆಗ್ಯಾಂಗುಮನ್ನು ಸಿದ್ದಪ್ಪನ ಬೈಗುಳ, ಬ್ರಿಂಗದ ಕಾಗದದಲ್ಲಿ ಚಿತ್ರ ಮಾಡುವ ಸನ್ನಿವೇಶ - ಹೀಗೆ ಇವು ಒಂದಕ್ಕೊಂದು ಸಂಬಂಧ ಪಡೆದುಕೊಂಡಿವೆ.

ಅಮಾಸನ ಸ್ಥಿತಿಯನ್ನು ತೆಂಗಿನ ಮರದ ಬೆಳವಣಿಗೆಯೊಂದಿಗೆ ಸಮೀಕರಿಸಬಹುದಾದ ಸಾಧ್ಯತೆಗಳು ಕತೆಯೊಳಗೇ ಇವೆ. ಇದು ಜಮೀನ್ದಾರಿ ಸಮಾಜದ ಆರ್ಥಿಕ ರಚನೆಯೊಂದಿಗೆ ನೇರ ಸಂಬಂಧ ಪಡೆದಿರುತ್ತದೆ.

ಮಾಟ ಮಾಡಿ, ತೆಂಗಿನ ಕಾಯಿಯನ್ನು, ಯಾರೊ ಸುಡುಗಾಡಲ್ಲಿ ಹೂತಿರುತ್ತಾರೆ. ಅದು ಸಸಿಯಾಗಿ ಭೂಮಿಯನ್ನು ಸೀಳಿಕೊಂಡು ಬಂದಿರುತ್ತದೆ. ಕುರಿಯಯ್ಯ ಅದನ್ನು ಕಿತ್ತು ತಂದು ತನ್ನದು ಅಂತಾರು ಇರ್ಲಿ ಎಂದು ಮಾರಿಗುಡಿ ಮೂಲೆಯಲ್ಲಿ ನೆಟ್ಟಿರುತ್ತಾನೆ. ಅದು ಬೆಳೆಯುತ್ತಾ, ಗರಿ ಕಳಚುತ್ತಾ, ಗರಿ ಕಳಚಿದಲ್ಲಿ ಗುರುತು ಉಳಿಸುತ್ತ, ಬೆಳೀತ ಬೆಳೀತ ಮೇಲಕ್ಕೆ ಮೇಲಕ್ಕೆ ಅಂತ ಇನ್ನೂ ಬೆಳೆದು ನಿಂತಿರುತ್ತದೆ.

ಅಮಾಸನ ಹುಲಿವೇಷದ ಕುಣಿತದಿಂದ ನಿದ್ರೆಗೆಟ್ಟಿರುವ ಗೌಡ, ಆಳನ್ನು ಕುರಿತು ಮರಿಹುಲಿವೇಷದ ಬಗ್ಗೆ ವಿಚಾರಿಸುತ್ತಾನೆ. ಆಳು ಹಿಂಜರಿಯುತ್ತಾ ಹಿಂಜರಿಯುತ್ತಾ ಉತ್ತರಿಸುತ್ತಾನೆ. ಗೌಡ 'ಎಲಾ ಅವ್ನ! ಆಗ್ಲೆ ಅಷ್ಟು ಬೆಳೆದು ಬುಟ್ಟವ್ನಾ!" ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ಈ ಭಯಮಿಶ್ರಿತ ಆಶ್ಚರ್ಯದಲ್ಲಿ, ಬೆಳೆಯ ಬಾರದಿತ್ತು ಎಂಬ ದ್ವೇಷವೂ ಇದ್ದಂತಿದೆ. ಜೊತೆಗೆ ಈ ಹಿಂದೆ ಗೌಡನಿಗೆ ಯಾವುದೋ ಎಳೆಯಲ್ಲಿ ಅಮಾಸನ ಸೂಕ್ಷ್ಮ ಪರಿಚಯವೂ ಇರುವಂತಿದೆ. ಅಂದರೆ ತೆಂಗಿನ ಕಾಯಿಯನ್ನು ಹೇಗೆ ಮಸಣದಲ್ಲಿ ಮಾಟ ಮಾಡಿ ಹೂಳಲಾಗಿತ್ತೋ ಇದೇ ಪ್ರಯತ್ನ ಅಮಾಸನ ಮೇಲೆಯೂ ನಡೆದಿರಬಹುದಲ್ಲವೇ? ಎಂಬ ಪ್ರಮೇಯವನ್ನು ಇಟ್ಟುಕೊಂಡರೆ, 'ಆತನ ತಂದೆ ತಾಯಿಗಳು ನಾನಾ ನಿಮಿತ್ತ ದೈವಾಧೀನರಾದರು' ಎಂಬುದು ತಕ್ಕ ಪುಷ್ಟಿಯನ್ನು ಒದಗಿಸುತ್ತದೆ. ಮತ್ತು ಗೌಡನ ಪ್ರತಿಕ್ರಿಯೆಯಲ್ಲಿ ಇದು ಅಂತರ್ ಸಂಬಂಧ ಪಡೆಯುತ್ತದೆ. ಕುರಿಯಯ್ಯನ ಶ್ರಮದಲ್ಲಿ ತೆಂಗಿನಮರ ಬೆಳೆದರೆ, ಇವನ ಆಶ್ರಯದಲ್ಲಿ ಅಮಾಸ ಬೆಳೆಯುತ್ತಿದ್ದಾನೆ.

ಅಮಾಸ ಕ್ರಿಯಾಶೀಲ. ಈತ ಓಡುತ್ತಿದ್ದರೆ ಕತ್ತಲು ಕಲಕುತ್ತದೆ. ಬಸಣ್ಣ ಬಡಿಯುವ ತಮಟೆಯ ದನಿಗೆ ಎಲ್ಲರಿಗಿಂತಲೂ ಚೆನ್ನಾಗಿ ಹೆಜ್ಜೆಹಾಕಿ ಕುಣಿಯುವ ಕಲೆಗಾರಿಕೆ ಅಮಾಸನದು. ಬಂಗಾರಿಯಂಥ ಬಂಜೆಯಲ್ಲಿಯೂ ಮಕ್ಕಳ ಆಸೆ ಹುಟ್ಟಿಸುವ ಆಕರ್ಷಣೆ ಈತನದು. ಬ್ರಿಂಗದ ಕಾಗದದಲ್ಲಿ-ಗಂಡಭೇರುಂಡ ಮಾಡುತ್ತಿದ್ದುದನ್ನು ನೋಡುವ ಗುಂಪಿನಲ್ಲಿ ಅತ್ಯಂತ ಸೂಕ್ಷ್ಮವಾಗಿ ಅದನ್ನು ಗ್ರಹಿಸುವನು. ತೆಂಗಿನ ಮರಕ್ಕೆ ಬಳಿದ ಬಣ್ಣವನ್ನು ಗಮನಿಸಿ ಅದನ್ನು ಕುರಿಯಯ್ಯನಿಗೆ ತಿಳಿಸುವನು.

ತೆಂಗಿನಮರ ಕುರಿಯಯ್ಯನ ಶ್ರಮದ ಪ್ರತೀಕ. ಆದರೆ ಅದು ಬೆಳೆದು ಫಲ ಕೊಡುವ ಸಮಯಕ್ಕೆ ಅದರ ಬುಡಕ್ಕೆ ಬಿಳಿ ಬಣ್ಣವನ್ನು ಬಳಿಯುವ ಮೂಲಕ ಜಮೀನ್ದಾರರು ತಮ್ಮದನ್ನಾಗಿಸಿಕೊಂಡಿದ್ದಾರೆ. ಮಾತ್ರವಲ್ಲ ಆಳುಗಳ ಮೂಲಕ ನಿಮಿಷಾರ್ಧದಲ್ಲಿ ಅದರ ಫಲವನ್ನು ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಇಲ್ಲಿ

ಕುರಿಯಯ್ಯನ ವರ್ಗದ ಆಳನ್ನು ಬಳಸಿಕೊಂಡಿರುವುದು ಮತ್ತು ಈ ಇಡೀ ಸಂದರ್ಭ ಜಮೀನ್ದಾರಿ ಸಮಾಜದ ಉತ್ಪಾದನಾ ಸಬಂಧವನ್ನು ಕಟ್ಟಿಕೊಡುತ್ತದೆ.

ಮಾರಿಗುಡಿಯಲ್ಲಿ ಕೆಲವರು ಬ್ರಿಂಗದ ಕಾಗದದಲ್ಲಿ ಗಂಡಭೇರುಂಡ ಮಾಡುತ್ತಿರುತ್ತಾರೆ. ಅಲ್ಲಿ ಸೇರಿದ್ದ ಉಳಿದವರು ಮಾರ್ಗದರ್ಶನ ಮಾಡುತ್ತಿರುತ್ತಾರೆ. ಅಂದರೆ ಆ ಕುಸುರಿಕಲೆ ಎಲ್ಲರಿಗೂ ತಿಳಿದಂತಿದೆ. ಸಹಜವಾಗಿ ಕಲೆಯ ತಿಳುವಳಿಕೆ ಶ್ರಮ ಜೀವಿ ವರ್ಗದಲ್ಲಿ ವ್ಯಕ್ತಿ ಕೇಂದ್ರಿತವಲ್ಲ; ಸಮೂಹ ಕೇಂದ್ರಿತ. ಆದರೆ ಬುದ್ಧಿಜೀವಿ ವಲಯದಲ್ಲಿ ಅದು ಸಮೂಹ ಕೇಂದ್ರಿತವಲ್ಲ; ವ್ಯಕ್ತಿ ಕೇಂದ್ರಿತ ಎಂಬುದನ್ನು ಸೂಚಿಸುತ್ತಿರುವಂತಿದೆ.

ರೈಲ್ವೆ ಗ್ಯಾಂಗುಮನ್ನು ಸಿದ್ದಪ್ಪ ಜಾತ್ರೆಯ ದಿನ ರಾತ್ರಿ ವೋವರಾಗಿ ಕುಡಿದು, ಲೈಟು ಕಂಬವನ್ನು ನೋಡಿ ರೋಷಗೊಳ್ಳುತ್ತಾನೆ. ರಾಜಕಾರಿಣಿ, ಕಂಟ್ರಾಕ್ಟರ್, ರೈಲ್ವೆ ಬಾಸ್, ಬಡ್ಡಿ ಸಾಲ ಕೊಡುವ ಮಾದಪ್ಪ ಇವರಿಗೆ ಲೈಟು ಕಂಬದ ನೆಪದಲ್ಲಿ ಸಿಟ್ಟಿಗೆದ್ದು ಬಯ್ಯುತ್ತಾನೆ. 'ಕಮ್ಯುನಿಸಮು' ಬರಬೇಕೆಂದು ಸಾರುತ್ತಾನೆ. ಇದು ಲೇಖಕರ ಆಶಯವಿರುವಂತಿದೆ ಎಂದು ಸರಳವಾಗಿ ತೀರ್ಮಾನಿಸುವಂತಿಲ್ಲ. ಯಾಕೆಂದರೆ, ಇವರ ಒಟ್ಟು ಸಾಹಿತ್ಯದಲ್ಲಿ ಇದಕ್ಕೆ ತಕ್ಕ ಪುರಾವೆ ಸಿಗುವುದಿಲ್ಲ. ಇದಕ್ಕಿಂತ ಮುಖ್ಯವಾಗಿ ವಾಸ್ತವವನ್ನು ಅಪ್ರಜ್ಞಾಪೂರ್ವಕ ಸ್ಥಿತಿಗೆ ಏಕೆ ವರ್ಗಾಯಿಸುತ್ತಾರೆ ಎಂಬುದೇ ಮುಖ್ಯ ಪ್ರಶ್ನೆಯಾಗುತ್ತದೆ.

ಅಮಾಸನ ಹುಲಿವೇಷವೂ ಇಂಥದೇ. ಕುರಿಯಯ್ಯನ ಕಾಲದಲ್ಲಿ ಅವನೂ ಹುಲಿವೇಷ ಹಾಕುತ್ತಿದ್ದ. ಆಗ ಧಣಿಗಳು ಆತನನ್ನು ಸಂಪೂರ್ಣ ತಮ್ಮ ಅಂಕೆಯಲ್ಲಿಟ್ಟುಕೊಳ್ಳುತ್ತಿದ್ದರು. ಆದರೆ ಅಮಾಸನ ಹುಲಿವೇಷ ಸ್ವಲ್ಪ ಭಿನ್ನ. ದೊಡ್ಡ ಹುಲಿವೇಷ, ಕತ್ತೆ ಕಿರುಬನ ವೇಷ, ಮರಿ ಹುಲಿವೇಷ - ಈ ಎಲ್ಲವೂ ನಿಶಾನೆಯೊಂದಿಗೆ ಕುಣಿಯುತ್ತಾ ಬರುತ್ತವೆ. ಈ ಕುಣಿತ ಕೇರಿಯ ಜನರನ್ನು ದಂಗು ಬಡಿಸುತ್ತದೆ. ಒಕ್ಕಲಗೇರಿಗೆ ಬರುತ್ತದೆ. ಅಲ್ಲಿ ಗೌಡರು ಶಾನುಭೋಗರು ಮುಂತಾದ ಮೇಲುಜಾತಿಯವರು ಇನಾಮು ಕೊಟ್ಟು ಶಭಾಷ್‌ಗಿರಿ ಪಡೆಯುತ್ತಾರೆ. ಇದು ಕೆಳಜಾತಿಯವರ ಹೆಮ್ಮೆಯನ್ನೂ, ಮೇಲು ಜಾತಿಯವರ ಕುತಂತ್ರವನ್ನೂ ಒಮ್ಮೆಗೇ ಪ್ರಕಟಿಸುತ್ತದೆ.

ಈ ಕುಣಿತವನ್ನು ನೋಡಿ ಮಲಗಿದ್ದ ಗೌಡನ ನಿದ್ರೆಯನ್ನು ಅಮಾಸನ ಹುಲಿವೇಷ ಕೆಡಿಸುತ್ತದೆ. ಆಶ್ಚರ್ಯ ಭಯವನ್ನುಂಟುಮಾಡುತ್ತದೆ. ಅಮಾಸನ ಹುಲಿವೇಷದ ಕ್ರಿಯೆಯ ಪರಿಣಾಮವನ್ನು ಈ ತಲೆಮಾರಿನ ಯುವಜನಾಂಗದ ಎಚ್ಚರಿಕೆಯ ಆಶಯವೆಂದು ವಿವರಿಸಲು ಸಾಧ್ಯವಿದೆ. ಆದರೆ ಅದನ್ನು ವೇಷದ ರೂಪಕ್ಕೆ ವರ್ಗಾಯಿಸಿರುವುದು ವಾಸ್ತವವಾದಿ ಧೋರಣೆಯಲ್ಲ; ಅದು ಪಲಾಯನವಾದಿ ಧೋರಣೆ ಎನ್ನದೆ ಬೇರೆ ಮಾರ್ಗವಿಲ್ಲ.

○

# ಒಡಲಾಳ

ಒಡಲಾಳ ಒಂದು ಉದ್ದವಾದ ಕತೆ. ದಲಿತ ಕುಟುಂಬವೊಂದರ ಮೇಲೆ ಜಮೀನ್ದಾರರ ಮತ್ತು ಪೊಲೀಸರ ಆಕ್ರಮಣ ನಡೆಯುವುದು, ಅದು ವಿಫಲವಾಗುವುದು, ಕೊನೆಗೂ ಈ ಕುಟುಂಬ ಅಸಹಾಯಕವಾಗುವ ಸ್ಥಿತಿಯನ್ನು ಕತೆ ವಿವರಿಸುತ್ತದೆ. ದಲಿತ ಹೆಣ್ಣೊಬ್ಬಳ ಮೂಲಕ ಬಿಚ್ಚಿಕೊಳ್ಳುವ ಈ ಕತೆಯಲ್ಲಿ, ಸಾಕವ್ವನ ಹುಂಜ ಕಳವಾಗಿರುವುದು - ಅದನ್ನು ಹುಡುಕುವ ಬಗೆ, ಎತ್ತಪ್ಪನ ಕಡಲೆಕಾಯಿ ಕಳವಾಗಿರುವುದು - ಅದನ್ನು ಜಪ್ತಿ ಮಾಡುವ ಕ್ರಮ, ಆಸ್ತಿಯ ವಿಷಯಕ್ಕೆ ಜಗಳ ಶುರುವಾಗುವುದು - ಎಲ್ಲರನ್ನೂ ಆವರಿಸುವುದು - ಇವುಗಳ ಪರಿಣಾಮ ಹರಡುವ ಬಗೆ, ಪ್ರತಿಕ್ರಿಯೆಗಳ ಸ್ವರೂಪ ಘಟನೆಯಿಂದ ಘಟನೆಗೆ ವಿಸ್ತಾರವಾಗಿ ಬೆಳೆಯುತ್ತಾ ಸಾಗುತ್ತದೆ.

ಹುಂಜ ಕಳವಾಗಿರುವುದು ಮೊದಲು ಸಾಕವ್ವನ ಗಮನಕ್ಕೆ ಬರುತ್ತದೆ. ನಂತರ ಕುಟುಂಬವನ್ನು ಆವರಿಸಿ, ಕೊನೆಗೆ ಚಿನಾಲಿ ಪುಟ್ಟಿಯ ಮೂಲಕ ಇಡೀ ಕೇರಿಗೂ ಹರಡುತ್ತದೆ. ಸಾಕವ್ವ ಸಂಕಟದಿಂದ ಕಣ್ಣೀರು ಹಾಕಿ ಗೋಗರೆದರೂ ಕುಟುಂಬದ ಉಳಿದವರು ನಿರ್ಲಿಪ್ತರಾಗುತ್ತಾರೆ. ಇವರಿಗೆ ಈ ಬಗ್ಗೆ ವಾಸ್ತವ ತಿಳಿದಂತಿದೆ. ಮೊಮ್ಮಗ ಶಿವೂನೊಂದಿಗೆ ಸಾಕವ್ವ ಇಡೀ ಕೇರಿಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಹುಡುಕುತ್ತಾಳೆ. ಇಂದಲ್ಲ ನಾಳೆ ಬರುತ್ತದೆ ಎಂದು ನಂಬುತ್ತಾಳೆ. ಮನೇದೇವರ ಮೇಲೆ ಕೋಪ ಬಂದರೂ ಭಾರವನ್ನು ಅದಕ್ಕೇ ಹೊರಿಸುತ್ತಾಳೆ. ಕೇರಿಯ ಜನರ ಹಾಸ್ಯ ವ್ಯಂಗ್ಯಕ್ಕೆ ಸಾಕವ್ವನ ಜಪ್ತಿ ಆಹಾರವಾಗುತ್ತದೆ.

ಸಾಕವ್ವಳ ಹಿರಿಯ ಮಗಳ ಮೇಲಿನ ಪ್ರೀತಿಯ ಮಾತಿನಲ್ಲಿ, ಪ್ರಾಸಂಗಿಕವಾಗಿ ಬಂದ ಆಸ್ತಿಯ ಪ್ರಸ್ತಾಪ ಕುಟುಂಬದೊಳಗಿನ ಜಗಳಕ್ಕೆ ಮೂಲವಾಗುತ್ತದೆ. ಇದು ಇಡೀ ಕುಟುಂಬವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಇದರಿಂದ ಸಿಟ್ಟು, ದುಃಖ, ಸಂಕಟ, ಕಣ್ಣೀರು, ವಾದ- ಪ್ರತಿವಾದಗಳು ಉಂಟಾಗಿ ಒಡಲನ್ನು ಕಲಕುತ್ತವೆ. ಇವು ಮುಖ್ಯವಾಗಿ ಚೆಲುವಮ್ಮ ಮತ್ತು ಪುಟಗೌರಿಯರಲ್ಲಿ ಪರಿಪಕ್ವಗೊಳ್ಳುತ್ತವೆ. ಕಳೆದುಕೊಂಡ ಹುಂಜವನ್ನು ಹುಡುಕುವಲ್ಲಿ ಸಾಕವ್ವಳಿಗೆ ಸಾಕುಸಾಕಾಗಿ ಹೋದರೆ, ಈ ಜಗಳ ಚೆಲುವಮ್ಮ ಮತ್ತು ಪುಟಗೌರಿಯಲ್ಲಿ ಇದೇ ಪರಿಣಾಮವನ್ನು ಉಂಟುಮಾಡುತ್ತದೆ. ಈ ಕುಟುಂಬವನ್ನೇ ತೊರೆಯುವ ಹಂತ ತಲುಪಿದ್ದ ಚೆಲುವಮ್ಮನನ್ನು ಕಾಳಣ್ಣ ಸುಧಾರಿಸುತ್ತಾನೆ. ಪುಟಗೌರಿ

ಈ ಜಗಳದಿಂದಾಗಿ ಈ ಕುಟುಂಬದಿಂದ ಹೊರಹೋದರೆ ಸಾಕಲ್ಲಾ ಎಂಬ ಸ್ಥಿತಿಯನ್ನು ಅನುಭವಿಸುತ್ತಿದ್ದಾಳೆ.

ಪುಟಗೌರಿಯ ಯೌವ್ವನ ಸಹಜವಾದ ಸೌಂದರ್ಯಕಲ್ಪನೆ, ಕಲಾಪ್ರಜ್ಞೆ, ಶಿವೂನ ಸಡಗರ ಸಂಭ್ರಮಗಳು ಸಾಕವ್ವನಲ್ಲಿ ನಕಾರಾತ್ಮಕ ಪರಿಣಾಮವನ್ನುಂಟು ಮಾಡುತ್ತವೆ. ಈ ಸಂದರ್ಭದಲ್ಲಿ ಸಾಕವ್ವ ಹೇಳುವ ಗಾದೆಯ ಮಾತು (ಅದ್ಯಾರೊ ಒಬ್ಬಳು ಕುಟ್ಟೊ ಬತ್ತ ಬುಟ್ಟು ಹುಟ್ಟೊ ಶ್ಯಾಟ ನೋಡ್ಕತಿದ್ಲಂತೆ) ಸಾಮಾಜಿಕ ವಾಸ್ತವತೆ ಮತ್ತು ಸಾಮಾಜಿಕ ಜವಾಬ್ದಾರಿಕೆ ಹಿಂದಕ್ಕೆ ಸರಿದು, ಕಲಾತ್ಮಕತೆಯ ಹೆಸರಿನಲ್ಲಿ ಸಾಮಾಜಿಕ ಹೊಣೆಗೇಡಿತನ ಪ್ರಧಾನವಾಗುತ್ತಿರುವುದರ ಪರಿಪಕ್ವ ವಿಡಂಬನೆಯಾಗಿದೆ. ಶಿವೂನ ಸೂಚನೆಯಂತೆ ತಲೆಯಿಂದ ಪ್ರಾರಂಭಿಸಿ ನವಿಲು ಚಿತ್ರ ಬರೆಯುವ ಬುದ್ಧಿ ಪ್ರಧಾನ ಕಲೆಗಾರಿಕೆಯನ್ನು ಆನುಷಂಗಿಕವಾಗಿಸುತ್ತಾ, ಪುಟಗೌರಿ ಕಾಲಿನಿಂದ ಆರಂಭಿಸಿ ನವಿಲು ಚಿತ್ರ ಬರೆಯುವ ಕ್ರಿಯೆ ದೈಹಿಕ ಶ್ರಮ ಪ್ರಧಾನ ಕಲೆಗಾರಿಕೆಯ ಕೌಶಲ್ಯಕ್ಕೆ ಬೆಲೆ ಕಟ್ಟಿರುವಂತಿದೆ. ಪೊಲೀಸರ ಜಪ್ತಿಗೆ ಕಾಣದೆ ನವಿಲು ಚಿತ್ರ ಕುಣಿಯುತ್ತಿರುವುದಕ್ಕಿಂತಲೂ, ಕುಟುಂಬದವರಿಗೇ ಯಾವ ಪರಿಣಾಮವನ್ನುಂಟುಮಾಡಿತು ಎಂಬುದು ಮುಖ್ಯವಾಗಿ ಕಾಡುತ್ತದೆ.

ಶಾಲೆಯ ಪಾಠದ ಪರಿಮಿತಿಯಲ್ಲಿ ಲೆಕ್ಕ ಮಾಡುವ ಶಿವೂನ ಶೈಕ್ಷಣಿಕ ತಿಳುವಳಿಕೆ ಸಾಕವ್ವನ ಬದುಕಿನ ವ್ಯವಹಾರವೊಂದನ್ನು ಬಿಡಿಸುವಲ್ಲಿ ಸೋಲುತ್ತದೆ. ಇದು ಇಡಿಯ ಶಿಕ್ಷಣ ಕ್ರಮದ ವ್ಯಂಗ್ಯ ಹೇಗೋ ಅದೇ ಸಮಯಕ್ಕೆ ದಲಿತರ ಬದುಕಿನ ಬವಣೆ ಮತ್ತು ಶಿಕ್ಷಣ ಕ್ರಮದ ನಡುವಿನ ಕಂದಕದ ಸೂಚಕವೂ ಆಗಲು ತುಡಿಯುವಂತಿದೆ.

ಕತೆಯ ಅತ್ಯಂತ ಮುಖ್ಯವಾದ ಮತ್ತು ಹೆಚ್ಚು ಚರ್ಚಾಸ್ಪದವಾದ ವಿಚಾರ ಸಾಹುಕಾರ ಎತ್ತಪ್ಪನವರ ಕಡಲೇಕಾಯಿಯ ಕಳ್ಳತನ. ಜಮೀನು ಇದ್ದರೂ ದುಡಿಯದ, ಹೇಗಾದರೂ ಮಾಡಿ ಜೀವನ ತಳ್ಳುವ ವಿಧಾನ ಸಾಕವ್ವನ ಕುಟುಂಬದ್ದು. ದುಡಿಯದೆ ಕೂತುಣ್ಣುವ ಸ್ವಭಾವ ದಲಿತರಲ್ಲಿ ಹೆಚ್ಚೆಂದರೆ ವ್ಯಕ್ತಿಯೊಬ್ಬನ ವೈಯಕ್ತಿಕ ನೆಲೆಯಲ್ಲಿ ಬರಬಹುದಷ್ಟೆ ಹೊರತು ಕೌಟುಂಬಿಕ ಸ್ವರೂಪದಲ್ಲಾಗಲಿ, ಸಮುದಾಯದ ರಚನೆಯಲ್ಲಾಗಲಿ ಕಾಣುವುದೇ ಇಲ್ಲ. ಇದು ಕಳ್ಳತನವಲ್ಲ ಹೊಟ್ಟೆಯ ಪ್ರಶ್ನೆ ಎನ್ನುವುದಾದರೆ, ಸಾಕವ್ವನ ಕಳವಾದ ಹುಂಜಕ್ಕೂ ಇದೇ ಮಾತನ್ನು ಅನ್ವಯಿಸಬಹುದಾದ ಸಾಧ್ಯತೆಯ ಪ್ರಶ್ನೆ ಏಳುತ್ತದೆ. ದಲಿತ ಲೋಕದಲ್ಲೇ ಕಳ್ಳತನದ ಜೀವನ ಕ್ರಮವನ್ನು ಚಿತ್ರಿಸುವ ಲೇಖಕ ಹಾಗು ಆತನ ಒತ್ತು, ಓತಾಸಕ್ತಿ ಮತ್ತು ಧೋರಣೆ ದಲಿತರಲ್ಲೇ ಯಾವ ಸ್ತರದ ಲೇಖಕನಿಂದ ಬರಲು ಸಾಧ್ಯ? ಜೊತೆಗೆ ಇದು ಯಾವ ಸ್ತರದ ದಲಿತ ಸಮುದಾಯವನ್ನು ಪ್ರತಿನಿಧಿಸುತ್ತದೆ? ಎಂಬ ಪ್ರಶ್ನೆಗಳ ಉತ್ತರಕ್ಕೆ ಹೆಚ್ಚು ಹೆಣಗಾಡಬೇಕಾದ ಅವಶ್ಯಕತೆಯಿಲ್ಲ ಎಂದು ಕಾಣುತ್ತದೆ. ಇದರ ಜೊತೆಯಲ್ಲೇ ಹುಟ್ಟುವ ಮತ್ತೊಂದು ಪ್ರಶ್ನೆ ಇದು ಎಷ್ಟರ ಮಟ್ಟಿಗೆ ಸಾಮಾನ್ಯೀಕರಣಗೊಳ್ಳುವ ಗುಣವನ್ನು ಪಡೆದಿದೆ ಎಂಬುದು.

ಗೌರಮ್ಮಳ ಹಿರಿಯ ಮಗ ದುಪ್ಪಿಕಮೀಷನರು ರೋಗಿಷ್ಟ ನಿಷ್ಕ್ರಿಯಾಶೀಲ. ಹೊಟ್ಟೆ ಪ್ರಶ್ನೆಗೆ ಮಾತ್ರ ಓಗೊಡುವವನು. ಇವನು ಇಡೀ ಕುಟುಂಬದಲ್ಲೇ ಶ್ರಮರಹಿತ ಅನ್ನಕ್ಕೆ ಸಂಕೇತವಾದರೆ, ಇಡೀ ದಲಿತ ಲೋಕದೊಳಗೆ ಸಾಕವ್ವಳ ಕುಟುಂಬ ಇದರ ಮತ್ತೊಂದು ಪ್ರತಿರೂಪವಷ್ಟೆ. ಬದುಕಿನ ವಾಸ್ತವದಲ್ಲಿ ಯಾವುದು 'ಸಾಮಾಜಿಕ ಅಪರಾಧ'ವೆಂದು ಒಪ್ಪಿತವಾಗಿದೆಯೋ ಅದೇ ಅಂಶ ಕಲಾಕೃತಿಯೊಳಗೆ 'ಮೌಲ್ಯ'ವಾಗಿ ಪರಿಗಣನೆಯಾಗುವುದಾದರೆ, ಇದು ದಲಿತರ ವಾಸ್ತವ ಬದುಕಿನ ಬಗ್ಗೆ ಯಾವ ಸ್ವರೂಪದ ಕಾಳಜಿಯದು ಎಂಬ ಪ್ರಶ್ನೆ ಎದುರಾಗುತ್ತದೆ. ಇದೇ ಪ್ರಸಂಗವನ್ನು ಮತ್ತೊಂದು ರೀತಿಯಲ್ಲಿ ವಿವರಿಸಿಕೊಳ್ಳಲೂ ಸಾಧ್ಯವಿದೆ. ಆಸ್ತಿಯ ಪ್ರಶ್ನೆ ಸಾಕವ್ವಳ ಕುಟುಂಬದೊಳಗೇ ಒಂದು ಜಗಳವನ್ನುಂಟುಮಾಡಿದರೆ, ಈಗ ಕುಟುಂಬದ ಹೊರಗಿನ ಶಕ್ತಿಗಳಾದ ಭೂಮಾಲೀಕರು ಮತ್ತು ಪೊಲೀಸರು ಏಕಕಾಲಕ್ಕೆ ಸಾಕವ್ವಳ ಕುಟುಂಬದ ಮೇಲೆ ದಾಳಿ ಮಾಡುತ್ತಾರೆ. ಇದು ಒಂದು ರೀತಿಯ ಹೋರಾಟದ ಸ್ವರೂಪವನ್ನು ಸೃಷ್ಟಿಸುತ್ತದೆ. ಅಂದರೆ ಹೊರಗಿನ ಶಕ್ತಿಗಳ ಜೊತೆಯ ಹೋರಾಟಕ್ಕಾಗಿ ಈ ಕಳ್ಳತನ ಒಂದು ತಾಂತ್ರಿಕ ಪರಿಕರವಾಗಿ ಬಂದಿರಬಹುದೇ? ಎಂಬ ಪ್ರಶ್ನೆಯನ್ನು ಕೇಳಿಕೊಂಡರೂ ಕತೆಯ ಒಟ್ಟು ರಚನೆಯಿಂದ ಇದು ಪ್ರತ್ಯೇಕವಾಗಿಯೇನೂ ನಿಲ್ಲುವುದಿಲ್ಲ. ಅಂತೂ ಒಂದು ಸಮಾಜದ ಕೇಂದ್ರೀಯ ಘಟಕವಾದ ಸಾಕವ್ವಳ ಕುಟುಂಬ ಮತ್ತು ವ್ಯವಸ್ಥೆಯ ಕೇಂದ್ರೀಯ ಘಟಕ ಹಾಗು ಪ್ರಬಲ ಶಕ್ತಿಗಳಾದ ಸಾಹುಕಾರ ಜೊತೆಗೆ ಪೊಲೀಸರ ಹೊರ ಜಗತ್ತು ಮುಖಾಮುಖಿಯಾಗುತ್ತವೆ. ಸಾಕವ್ವ ತನ್ನ ಕುಟುಂಬದೊಳಗಿನ ವೈರುಧ್ಯಗಳು ದ್ವಂದ್ವಗಳು ಇವನ್ನು ನಿಭಾಯಿಸಿಕೊಂಡು, ಹೊರಗಿನ ಆಕ್ರಮಣಗಳನ್ನು ಎಷ್ಟರಮಟ್ಟಿಗೆ ಎದುರಿಸಿದಳು? ಎಂಬ ಪ್ರಶ್ನೆ ಇಲ್ಲಿ ಬಹಳ ಮುಖ್ಯವಾಗುತ್ತದೆ. ಕಳೆದುಹೋದ ತನ್ನ ಹುಂಜವನ್ನು ಪಡೆಯಲಾಗದಿದ್ದುದಷ್ಟೇ ಅಲ್ಲದೆ ಮತ್ತೊಂದು ಹುಂಜವನ್ನು ಸಾಹುಕಾರ ಮತ್ತು ಪೋಲೀಸರು ಕಣ್ಣ ಮುಂದೆಯೇ ಸೆಳೆದುಕೊಂಡು ಹೋಗುವ ಸಂದರ್ಭದಲ್ಲಿ ಸಾಕವ್ವ ಮತ್ತು ಕುಟುಂಬ ಅದಕ್ಕೆ ಬೆಂಬಲ ತೋರಿಸುವುದು, ಏನೂ ಮಾಡಲಾಗದಂತಹ - ಹೋಗಲಿ ಏನನ್ನೂ ಅರಿಯದಂತಹ ಸ್ಥಿತಿಯಲ್ಲಿ ನಿಲ್ಲುತ್ತಾರೆ. ಈ ಮೂಲಕ ಕಾದಂಬರಿಕಾರರು ಏನನ್ನು ಪ್ರಕಟಿಸುತ್ತಿದ್ದಾರೆ. ಎಂಬ ಪ್ರಶ್ನೆ ಪ್ರಧಾನವಾಗಿ ಕಾಡುತ್ತದೆ.

ಹೊರಗಿನ ಶಕ್ತಿಗಳ ವೈರುಧ್ಯ ಮತ್ತು ವಿಕಾರಗಳನ್ನೂ ಕತೆ ನಿರೂಪಿಸುತ್ತದೆ. ವಿಕಾರ ಸರಳೀಕರಣಗೊಳ್ಳದೆ ನೋವು, ಶೋಷಣೆ, ವ್ಯಂಗ್ಯ ವಿನೋದಗಳಿಂದ ಕೂಡಿಬರುತ್ತದೆ. ಪೊಲೀಸ್ ಕಾನ್ಸ್‌ಟೇಬಲ್ ರೇವಣ್ಣನ ಪಾತ್ರ ಇದಕ್ಕೆ ಒಳ್ಳೆಯ ಉದಾಹರಣೆ. ಹೊರನೋಟಕ್ಕೆ ಕಡ್ಡಿ ಕೈ ಕಾಲುಗಳ, ಬೀಡಿ ಸೇದುವ, ಇಬ್ಬರು ಹೆಂಡಿರ, ಹತ್ತು ಹನ್ನೊಂದು ಮಕ್ಕಳ ಕುಟುಂಬದವನಾದ ಈತ ಇಲಾಖೆಯಲ್ಲಿ ಶೋಷಿತನಾದವನು. ಈ ಪೀಸಿ ರೇವಣ್ಣ ಎಸ್.ಐ.ನಿಂದ "ಭೋಸುಡಿ ಮಗ್ನೆ" (ಪುಟ-೭೬) ಎಂದು ಬೈಸಿಕೊಂಡರೆ, ಇದೇ ರೇವಣ್ಣ ಎತ್ತಪ್ಪನವರ ಆಳಿಗೆ "ಭೋಸುಡಿ ಮಗ" (ಪು. ೭೮) ಎಂದು ಬೈಯ್ಯುತ್ತಾನೆ. ಈ ಸಾಮಾಜಿಕ ವೈರುಧ್ಯ ಹೆಚ್ಚು ಆಸಕ್ತಿದಾಯಕವಾದುದು.

ಸಾಕವ್ವಳ ಹಿರೀಮಗಳು ಗಂಡನ ಮನೆಯಿಂದ ತಿರುಗಿ ತವರಿಗೇ ಬಂದಿದ್ದಾಳೆ. ಸಾಕವ್ವಳ ಒಲವು ಇವಳ ಕಡೆಗೇ ಇದೆ. ಚೆಲುವಮ್ಮ ಸಾಕವ್ವಳ ಮಧ್ಯೆ ಜಗಳ ನಡೆಯುತ್ತಿರುವಾಗ ಚೆಲುವಮ್ಮನ ಮಗು ಸಾಕವ್ವನ ಸುತ್ತವೇ ಸುಳಿಯುತ್ತದೆ. ಈ ಅಂಶಗಳು ಮಾತೃಪ್ರಧಾನವಾದ ಪಾಲನಾ ಗುಣವನ್ನು ಒತ್ತಿ ಹೇಳುತ್ತಿರುವಂತಿದೆ.

ಕತೆಯಲ್ಲಿ ಕುಟುಂಬವೊಂದರ ಎಲ್ಲಾ ಬಗೆಯ ಒಳವಿವರಗಳು ಹೇಗೆ ಪ್ರಕಟವಾಗಿವೆ ಎಂಬುದೇ ಮುಖ್ಯವಾಗಬೇಕಿಲ್ಲ. ಬದಲಾಗಿ ಕುಟುಂಬವೊಂದು ಹೊರಗಿನ ಶಕ್ತಿಗಳ ಜೊತೆಗೆ ಸಂಘರ್ಷದಲ್ಲಿ ಎಂಥ ಪಾತ್ರವನ್ನು ಪ್ರಕಟಿಸಿತು ಎಂಬುದೇ ಬಹಳ ಮುಖ್ಯವಾಗುತ್ತದೆ.



## ಕುಸುಮ ಬಾಲೆ

ಕುಸುಮಬಾಲೆ 'ದಲಿತರ ನೇಣಗಂಬ' ಎಂಬ ವಿಮರ್ಶೆಯನ್ನೂ, 'ಆಡುಮಾತಿನ ಕಾವ್ಯ' ಎಂಬ ಹೊಗಳಿಕೆಯನ್ನೂ ಪಡೆದಿದೆ. ಈ ಎರಡು ಅತಿಗಳ ನಡುವೆ ಇದನ್ನು ಅರ್ಥಮಾಡಿಕೊಳ್ಳಬೇಕು. ಇದಕ್ಕೆ ಸಾಂಪ್ರದಾಯಿಕವಾದ ಆದಿ-ಮಧ್ಯೆ- ಅಂತ್ಯಗಳಿಲ್ಲ. ಇಲ್ಲಿನ ಕಾಲದ ಚಲನೆಯೂ ಸರಳ ರೇಖಾಗತವಾಗಿಲ್ಲ. ಹಾಗಾಗಿ ಕತೆಯು ಒಂದೇ ಏಟಿಗೆ ಹಿಡಿಮುಷ್ಟಿಗೆ ಸಿಗುವುದಿಲ್ಲ. ಕುಸುಮಬಾಲೆಯ ಎಲ್ಲಾ ವಿವರಗಳೂ ಒಂದು ವಿಚಾರವನ್ನು ಪ್ರತಿಪಾದಿಸಲು ತೊಡಗುವುದಿಲ್ಲ. ಒಂದೊಂದರ ದಿಕ್ಕು ಒಂದೊಂದು. ಹಾಗಾಗಿ ಕಾದಂಬರಿಯನ್ನು ಸಾಂಪ್ರದಾಯಿಕವಾಗಿ ಪರಿಚಯಿಸುವುದು ಕಷ್ಟ. ಇಲ್ಲಿಯ ಅನುಕೂಲಕ್ಕೆ ಕೆಲವು ಮುಖ್ಯ ಸಂಗತಿಗಳನ್ನು ಹಿಡಿದು ಹೊರಡಬಹುದು.

ದುಡಿಮೆಯ ವಿಧಾನಗಳನ್ನು ಕುರಿತ ವಿಚಾರವು ಕವಲು ಕವಲಾಗಿ ಹಬ್ಬಿ ಹೆಣೆದುಕೊಂಡಿದೆ. ಅಕ್ಕಮಾದೇವಮ್ಮನ ಮಗ ಯಾಡ. ಅಕ್ಕಮಾದೇವಮ್ಮನ ಗಂಡ ಸತ್ತು ಹನ್ನೆರಡು ತಿಂಗಳಿಗೆ ಹಟ್ಟಿ ಜೀತಗಾರನಿಗೆ ಹುಟ್ಟಿದವನು ಯಾಡ. ಅಕ್ಕಮಾದೇವಮ್ಮ ಪಾಲಿಗಾಗಿ, ಕೂಸು ಯಾಡನನ್ನು ಕೋತಿಯಂತೆ ಅಂಟಿಸಿಕೊಂಡು, ಭಾವ- ಮೈದುನರಾದ ಬಸಪ್ಪಸ್ವಾಮಿ ಮತ್ತು ಸಿದ್ದೂರರಲ್ಲಿಗೆ ಬರುತ್ತಾಳೆ. ಬಸಪ್ಪಸ್ವಾಮಿಗೆ ಮಕ್ಕಳಿಲ್ಲ. ಈ ಇಬ್ಬರೂ ಕೂಡ ಅಕ್ಕಮಾದೇವಮ್ಮನ ಶೀಲದ ಬಗ್ಗೆ ತಕರಾರು ತೆಗೆದು ಆಸ್ತಿಯ ಪಾಲು ಕೊಡದೆ ಒದ್ದು ಓಡಿಸುತ್ತಾರೆ. ಅಕ್ಕಮಾದೇವಮ್ಮ ಹೋಟೆಲ್ ನಡೆಸಿ ಜೀವನ ಹೊರೆಯುತ್ತಾಳೆ. ನಂತರ ಯಾಡನು ದನ, ಕುರಿಗಳನ್ನು ಮೇಯಿಸುತ್ತಿದ್ದವನು ಅವನ್ನು ಕದ್ದು ಸಂತೆಗೆ ಒಯ್ದು ಅವನ್ನು ಮಾರಿ ಅಪಾರ ಹಣ ಸಂಪಾದಿಸುತ್ತಾನೆ. ಇಲ್ಲಿ ಈತನ ಅಸಾಮಾನ್ಯ ಚುರುಕು, ಚಾಲಾಕು ಮತ್ತು ಜಾಣತನಗಳ ಬಗ್ಗೆ ಲೇಖಕರ ಒತ್ತು ಇದೆ. ಈ ಒಲವು ಈ ಬಗೆಯ ದುಡಿಮೆಯನ್ನು ಪ್ರತಿಪಾದಿಸುತ್ತಿದೆ, ಓದುಗರಿಗೆ ಇದೊಂದು ಅಪಮಾರ್ಗ ಎಂದು ಅನಿಸದಿರುವಂತೆ ಇದನ್ನು ನಿಭಾಯಿಸಲಾಗಿದೆ.

ಅಮಾಸನ ದುಡಿಮೆ ಮುಟ್ಟಾದ ಹೆಂಗಸರ ಬಟ್ಟೆತೊಳೆಯುವುದು. ಈತ ದಲಿತ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸಿದರೆ ದುಡಿಮೆ ಇಲ್ಲದೆ ಪಾಪರ್ ಆಗುತ್ತಾನೆ. ಬದಲಾಗಿ ಬಾಡಿಗೆ ಸೈಕಲ್‌ನಲ್ಲಿ ಬಟ್ಟೆ ಕೊಂಡುಹೋಗುವುದನ್ನು ಉತ್ಸುಕತೆಯಿಂದ ವರ್ಣಿಸಲಾಗಿದೆ. ಇಲ್ಲಿ ಲೇಖಕರಿಗೆ ಅಮಾಸನ ಮೇಲಿರುವ ಪ್ರೀತಿ ಯಾರೂ ಒಪ್ಪುವಂತಹುದೇ. ಆದರೆ ಈತನ ಕಾಯಕ ಕುರಿತು "ಸ್ವಪ್ರತಿಭೆಯಿಂದ ಕಲಿತದ್ದು,

ನೇಮನಿಷ್ಠೆಯಲಿ ಮಾಡುತ್ತಿದ್ದಾನೆ" ಮುಂತಾದುವು ಈತನ ವೃತ್ತಿಯ ಬಗ್ಗೆ ಲೇಖಕರಿಗಿರುವ ಅಪಾರ ಒಲವು ಮತ್ತು ಕಾಳಜಿಯನ್ನು ಪ್ರಕಟಿಸುತ್ತವೆ. ದಲಿತ ವರ್ಗದ ಇಂದಿನ ತಲೆಮಾರು ಇಂತಹ ದುಡಿಮೆಯ ಬಗ್ಗೆ ಏನು ಹೇಳುತ್ತದೆ ಎಂದು ಆಲೋಚಿಸಬೇಕಾಗಿದೆ.

ಚನ್ನ ಬಿ.ಎ. ಫೇಲಾಗಿದ್ದಾನೆ. ನೌಕರಿಯಿಲ್ಲ. ಇವನ ತಂದೆ ಕಂಡ ಕಂಡವರಲ್ಲಿ ಬೀಡಿ ಕೇಳುತ್ತಾನೆ, ಮೇಲು ಜಾತಿಯ ಕುಸುಮಳನ್ನು ಕೂಡಿ, ಅವಳಿಗೆ ಮಗುವಾಗಿರುವ ಕಾರಣ ಈತನ ಕೊಲೆಯಾಗಿದೆ. ಕೊಲೆಯಾಗಿರುವ ಈತನನ್ನು ಬೊಂಬಾಯಿಯಲ್ಲಿ ಇರುವನೆಂದೂ, ಅಲ್ಲಿಯ ದೊರೆಮಗನಿಗೆ ಸಮನೆಂದೂ, ಇಂದಿರಿಗಾಂಧಿ ಇವನ ಮುಂದೆ ಏನೇನೂ ಅಲ್ಲವೆಂದೂ ಭ್ರಮಾ ಜಗತ್ತನ್ನು ನಿರ್ಮಿಸಲಾಗಿದೆ. ಈ ಭ್ರಮೆಯಲ್ಲಿ ಈತನ ತಂದೆ ತಾಯಿಗಳು ಈತನನ್ನು ಅತ್ಯಂತ ಎತ್ತರದಲ್ಲಿ ಕಲ್ಪಿಸಿಕೊಂಡು ಇವನ ಬರುವಿಕೆಗಾಗಿ ಕಾಯುತ್ತಿದ್ದಾರೆ. "ಸಂಬಂಜ ಅನ್ನೋದು ದೊಡ್ಡದು ಕನ" ಎಂದು ಕನಸು ಕಾಣುತ್ತಿದ್ದಾರೆ.

ಕುಸುಮಳ ತಂದೆ ಸೋಮಪ್ಪ ಚನ್ನನನ್ನು ಮುಗಿಸಿ, ಹಿಂದೆ ಐದು ಜನ, ಎಡ-ಬಲಕ್ಕೆ ಐದೈದು ಜನರೊಂದಿಗೆ ಒಂದು ರಾತ್ರಿ ಮನೆಗೆ ಬರುತ್ತಾನೆ. ಮಂಚದ ಮೇಲೆ ಮಲಗುತ್ತಾನೆ. ಆತನ ಆತ್ಮ ಎದ್ದು ಕೂರುತ್ತದೆ. ಮಂಚ ಮಾತನಾಡುತ್ತದೆ. ಅದು ಇತಿಹಾಸದ ವಿಭನ್ನ ಘಟ್ಟಗಳ ದುಡಿಮೆಯ ಪ್ರಧಾನ ವಿಧಾನಗಳನ್ನು ಮಂಡಿಸುತ್ತದೆ. ಪ್ರಾಚೀನ ರಾಜಪ್ರಭುತ್ವ ವ್ಯವಸ್ಥೆಯಿಂದ ಕತೆಯನ್ನು ಶುರುಮಾಡುತ್ತದೆ. ಮಧ್ಯಯುಗದ ಸಾಮಂತಶಾಹಿಯ ಬಗ್ಗೆ ಹೇಳುತ್ತದೆ. ಇಂದಿನ ಬಂಡವಾಳಶಾಹಿ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅದರ ಸ್ಥಿತಿಗತಿಯನ್ನು ತಾನೇ ಪ್ರಕಟಿಸುತ್ತದೆ. ಮಧ್ಯಯುಗದ ಸಾಮಂತಶಾಹಿಗಳ ರಾಜ ರಾಣಿಯರು ಕಾಮ ಕೇಳಿಗಳಲ್ಲಿ ತೊಡಗಿ ಇದನ್ನು ಹೊಲಸು ಮಾಡಿದ್ದಾರೆ. ರಾಜ ಮಹಾರಾಜರು ಇದರ ಮೇಲೆ ಆಮೋದ ಪ್ರಮೋದ ನಡೆಸಿದ್ದಾರೆ. ಸಾಹಿತ್ಯ-ಕಲೆ - ಸಂಗೀತಗಳಿಗೆ ಆಶ್ರಯ ನೀಡಿದ್ದಾರೆ. ಈಗ ಇದರಡಿಯಲ್ಲೇ ಕಪ್ಪು ಹಣದ ದಂಧೆ ನಡೆಯುತ್ತಿದೆ. ಬೀದಿಯಲ್ಲಿ ಇದನ್ನೀಗ ಹರಾಜು ಹಾಕಲಾಗಿದೆ. ತನ್ನ ಪಾಲನೆ-ಪೋಷಣೆ, ವೇದನೆ ಸಂಕಟಗಳನ್ನು ಮಂಚವು ತುಂಬಾ ಆಪ್ತವಾಗಿ ಹೇಳಿಕೊಳ್ಳುತ್ತದೆ.

ಗಾರಸಿದ್ದಾವ ಕುಡಿಯಲೆಂದು ಹದಿನಾರು ಎಳೆ ನೀರು ಕಿತ್ತು ಕುಡಿದಿದ್ದಾನೆ. ಒಡೆಯರು ಹಿಡಿದು ಕಟ್ಟಿ ಬಡಿದಿದ್ದಾರೆ. ಬಡಿದಾಗ ಗಾರಸಿದ್ದಾವನಿಗೆ ಬದಲಾಗಿ ಹೊಡೆದವರಿಗೇ ಸುಸ್ತಾಗಿದೆ. ಈ ಪ್ರಸಂಗದಲ್ಲಿ ದಲಿತ ಸಂಘದ ನಾಗರಾಜುವನ್ನು ತಂದು ಅವನ ಮೂಲಕ ಇದನ್ನು ಪೋಲೀಸಿಗೆ ಒಪ್ಪಿಸಬೇಕಿತ್ತು ಎಂದು ಕಾದಂಬರಿಕಾರರು ಸುಲಭವಾಗಿ ಹೇಳಿಸಿ ಬಿಡುತ್ತಾರೆ. ಇಲ್ಲಿ ಸ್ವಲ್ಪ ಎಚ್ಚರಿಕೆ ಬೇಕು. ಊಳಿಗಮಾನ್ಯ ಒಡೆಯರ ನ್ಯಾಯ ಪದ್ಧತಿ ಸರಿಯಿಲ್ಲ, ಬದಲಾಗಿ ಪ್ರಭುತ್ವದ ನ್ಯಾಯಪದ್ಧತಿ ದಲಿತರಿಗೆ ನಿಜವಾದ ನ್ಯಾಯ ದೊರಕಿಸಿಕೊಡುತ್ತದೆಂಬ ಧೋರಣೆ ಸ್ಪಷ್ಟವಾಗಿ ಎದ್ದು ಕಾಣುತ್ತಿದೆ. ವಿಚಿತ್ರವೆಂದರೆ

ಗುಣದಲ್ಲಿ ಈ ಎರಡು ಒಂದೇ. ದುರಂತವೆಂದರೆ ಲೇಖಕರು ಈ ಎರಡರ ನಡುವೆ ಗುಣಾತ್ಮಕ ವ್ಯತ್ಯಾಸವನ್ನು ಗುರುತಿಸಿರುವುದು.

ದಲಿತ ಸಂಘವು ಜೀತ ವಿಮೋಚನೆಗಾಗಿ ಮೆರವಣಿಗೆ ನಡೆಸಲು ಮುಂದಾಗಿದೆ. ಇಂಥ ಮೆರವಣಿಗೆಯಿಂದ ಜೀತ ವಿಮೋಚನೆ ಸಾಧ್ಯವಿಲ್ಲವೆಂಬುದು ಕಾದಂಬರಿಕಾರರ ನಿಲುವಾಗಿದೆ. ಆದರೆ ಪರ್ಯಾಯದ ಸೂಚನೆಯೂ ಕೂಡ ಗೈರು ಹಾಜರಾಗಿದೆ.

ಹೆಣ್ಣು- ಗಂಡುಗಳ ನಡುವಿನ ಸಂಬಂಧ ಈ ಕಾದಂಬರಿಯ ಮತ್ತೊಂದು ಮುಖ್ಯ ವಿಚಾರ. ಎಲ್ಲಾ ಕೆಳಜಾತಿಯ ಗಂಡುಗಳು ಮೇಲು ಜಾತಿಯ ಹೆಣ್ಣುಗಳನ್ನು ಕೂಡುವುದು ಇಲ್ಲಿಯ ವಿಶೇಷ. ಆದರೆ ಕಾದಂಬರಿಯೊಳಗೆ ಇದೊಂದು ತೀರಾ ಸಾಮಾನ್ಯ ಸಂಗತಿ ಎಂಬಂತೆ ವರ್ಣನೆಯಾಗಿದೆ. ಕಾದಂಬರಿಯ ಆರಂಭದಲ್ಲೇ ಚನ್ನ- ಕುಸುಮಿಯವರ ಸಂಬಂಧ ಕುರಿತ ವಿಷಯಕ್ಕೆ "ಎಲ್ರೂ ಮಾಡೋ ಯತಾರ್ಥನೆ ಹೇಳ್ತಳೆ" ಎಂದು ಸಾಮಾನ್ಯ ಸಂಗತಿಯಾಗಿ ಪರಿಗಣಿಸಲಾಗಿದೆ.

ಇಂತಹ ಕೆಲವು ಜೋಡಿಗಳನ್ನು ಇಲ್ಲಿ ಹೆಸರಿಸಬಹುದು, ಅಕ್ಕಮಾದೇವಮ್ಮ- ಹಟ್ಟಿ ಜೀತಗಾರ, ಬ್ರಾಹ್ಮಣರ ಭಗವತಿ - ಅಮಾಸ, ಮಧ್ವಾಚಾರ್ಯರ ಪಕ್ಕದ ಮನೆಯ ಸಾವಿತ್ರಿ- ಹರಿಜನ ಹುಡುಗ, ಕುಸುಮ - ಚನ್ನ ಹೀಗೆ. ಇಂತಹ ಸಂಗತಿಗಳನ್ನು ಸಮರ್ಥಿಸಲೆಂಬಂತೆ ಕುರಿಯಯ್ಯನ ನನ್ನಿಯ ಪ್ರಸಂಗ ಬರುತ್ತದೆ. ಹಿಂದಿನ ಕಾಲದಲ್ಲಿ ಮೇಲು ಜಾತಿಯ ಹೆಣ್ಣುಗಳನ್ನು ಕೆಳಜಾತಿಯವರು ಹೊತ್ತು ಕೊಂಡು ಹೋಗಿ ಭೋಗಿಸುತ್ತಿದ್ದರಂತೆ, ಅಂಥವರನ್ನು ಹೊರಗಿಡಲಾಯಿತು. ಹಾಗೆ ಹೊರಗುಳಿದವರು ಕೀಳುಜಾತಿ, ಉಳಿದವರು ಉತ್ತಮ ಜಾತಿ ಎಂಬುದು ಅಲ್ಲಿಯ ವಿವರಣೆ.

ದಲಿತ ಸಂಘದ ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಹೋರಾಟದ ಬಗ್ಗೆ, ಚಳುವಳಿಯ ಮುಖಂಡರು ಮತ್ತು ಕಾರ್ಯಕರ್ತರ ವರ್ತನೆಗಳ ಬಗ್ಗೆ ಕಟು ವಿಮರ್ಶೆ ರೂಪದ ವರ್ಣನೆ ಇದೆ. ಹಾಗಾದರೆ ಮುಂದೇನು? ಎಂಬ ಪ್ರಶ್ನೆ ಮಾತ್ರ ಹಾಗೇ ಉಳಿಯುತ್ತದೆ.

ಕೆಳಜಾತಿಯ ಎಷ್ಟೋ ಗಂಡುಗಳು ಮೇಲು ಜಾತಿಯ ಹೆಣ್ಣುಗಳನ್ನು ಕೂಡುತ್ತವೆ. ಅದರಲ್ಲಿ ಚನ್ನ ಮಾತ್ರ ಬಿ.ಎ. ಓದಿ ಫೇಲಾಗಿರುವವನು, ಮೇಲು ಜಾತಿ ಹೊಟ್ಟೆ ಉರಿಸಲು ಗಿರ್ಜಾಮೀಸೆ ಬಿಡುವವನು. ದಲಿತ ಸಂಘದ ನಾಗರಾಜುವಿನಿಂದ ತಪ್ಪಿಸಿಕೊಳ್ಳುವವನು. ಇವನ ಕೊಲೆಯಾಗುವುದು - ತಂದೆ ತಾಯಿಯರಿಗೆ ತಿಳಿಯದೆ, ಅವರು ಬೊಂಬಾಯಿಯಲ್ಲಿ ಶ್ರೀಮಂತನಾಗಿರುವನೆಂದು ನಂಬಿ ಕಾಯುವುದು ಏನನ್ನು ಸೂಚಿಸುತ್ತದೆ ಎಂಬುದು ತಿಳಿಯುವುದಿಲ್ಲ.

ಆರಂಭದ ಬರವಣಿಗೆಯಿಂದಲೂ ತಮ್ಮದೇ ಶೈಲಿಯನ್ನು ರೂಢಿಸಿಕೊಳ್ಳುತ್ತಾ ಬಂದ ದೇವನೂರರಿಗೆ ಕುಸುಮಬಾಲೆಯಲ್ಲಿ ಅದು ಸಂಪೂರ್ಣ ಮೈಗೂಡಿದಂತೆ ಕಾಣುತ್ತದೆ. ಒಂದೊಂದೂ ಭಾವದ ಹಲವು ಒಳ ಚಹರೆಗಳನ್ನು ಅನಾಯಾಸವಾಗಿ ಇಲ್ಲಿನ ಭಾಷೆ ಒಳಗೊಂಡಿದೆ. ಕರುಣೆ, ವಿಷಾದ, ನೋವು, ಸಂಕಟ, ಪ್ರತೀಕಾರ, ವ್ಯಂಗ್ಯ, ವಿನೋದ, ವಿಡಂಬನೆ, ಮುಂತಾದ ಹಲವು ವಿನ್ಯಾಸಗಳಲ್ಲಿ ಭಾಷೆ ಅತ್ಯಂತ ಸೂಕ್ಷ್ಮವಾಗಿ ಅಷ್ಟೇ ಸಹಜವಾಗಿ ಪ್ರಕಟವಾಗಿದೆ.

ಹಾಗೆಯೇ ಕನ್ನಡದ ಹಲವು ಶೈಲಿಗಳೂ ಇಲ್ಲಿವೆ. ಅಜ್ಜಿಯರ ದಾಟಿಯ ಜೋತಮ್ಮರ ಸಂಭಾಷಣೆ, ಮುಸ್ಲಿಮರ ಕನ್ನಡ ಧಾಟಿಯ ಸಾಬಿಯ ಮಾತು, ಬ್ರಾಹ್ಮಣರ ಧಾಟಿಯ ಮಧ್ವಾಚಾರ್ಯರ ಮಾತು, ಇಂತಹ ಹತ್ತಾರು ಮಾದರಿಗಳು ಅಯಾ ಸನ್ನಿವೇಶಗಳ ರಕ್ತಮಾಂಸಗಳನ್ನು ತುಂಬಿಕೊಂಡು ಹೊರಬಂದಿವೆ.



# ವಿಮರ್ಶೆ ಸಮೀಕ್ಷೆ ಮತ್ತು ಪಲ್ಲಟ

ಈ ಅಧ್ಯಾಯದಲ್ಲಿ ಎರಡು ಭಾಗಗಳಿವೆ. ಮೊದಲನೆಯದರಲ್ಲಿ, ದೇವನೂರರ ಸಾಹಿತ್ಯದ ಮೇಲೆ ಬಂದಿರುವ ವಿಮರ್ಶೆಯನ್ನು ಸಮೀಕ್ಷಿಸಲಾಗಿದೆ. ಎರಡನೆಯದರಲ್ಲಿ ದೇವನೂರರ ಸಾಹಿತ್ಯದ ಬೆಳವಣಿಗೆಯ ಕ್ರಮವನ್ನು ಆಧಾರವಾಗಿಟ್ಟುಕೊಂಡು ಚಿಂತನೆಯಲ್ಲಾದ ಪಲ್ಲಟವನ್ನು ಗುರುತಿಸಲಾಗಿದೆ.

ದೇವನೂರರ ಸಾಹಿತ್ಯದ ಮೇಲೆ ಬಂದಿರುವ ವಿಮರ್ಶೆಯಲ್ಲಿ ಮುಖ್ಯವಾಗಿ ಎರಡು ಧಾರೆಗಳನ್ನು ಗುರುತಿಸಬಹುದು. ಒಂದು, ದೇವನೂರು ಸಾಹಿತ್ಯದ ವಸ್ತು ಮತ್ತು ಧೋರಣೆಯನ್ನು ಪ್ರಧಾನವಾಗಿಸಿಕೊಂಡಿರುವುದು. ಮತ್ತೊಂದು, ನಿರೂಪಣೆಯ ಭಾಷೆ, ಶೈಲಿ, ತಂತ್ರ ಮತ್ತು ಕಲಾತ್ಮಕ ವಿಚಾರಗಳನ್ನು ಮುಖ್ಯವಾಗಿಸಿಕೊಂಡಿರುವುದು.

ದೇವನೂರರ ಸಾಹಿತ್ಯದ ಬಗ್ಗೆ ಬಹಳಷ್ಟು ವಿಚಾರ ವಿಮರ್ಶೆ ನಡೆದಿದೆ. ಇವರ ಸಾಹಿತ್ಯದ ಅಭಿವ್ಯಕ್ತಿ ಕ್ರಮದ ಬಗ್ಗೆಯೇ ಚರ್ಚೆ ನಡೆದಿದೆ. ಇಲ್ಲಿಯ ಅಭಿವ್ಯಕ್ತಿ ಸ್ವರೂಪದಲ್ಲಿನ ಪ್ರತಿಭಟನಾ ಮಾದರಿಯ ಬಗ್ಗೆ ರಾಜೇಂದ್ರ ಚೆನ್ನಿಯವರು ಹೀಗೆ ವ್ಯಾಖ್ಯಾನಿಸಿದ್ದಾರೆ: "ಯಾವುದನ್ನು ಯಜಮಾನ ಸಂಸ್ಕೃತಿ ಮಾನ್ಯ ಮಾಡುವುದಿಲ್ಲವೋ ಅಂದರೆ ದಲಿತ ಬದುಕಿನ ಜೀವಂತಿಕೆಯನ್ನು, ವಿಶಿಷ್ಟತೆಯನ್ನು, ಅದರ ಒಡಲಾಳದಲ್ಲಿರುವ ಅದಮ್ಯತೆಯನ್ನು, ಅದನ್ನು ಮೂರ್ತವಾಗಿ ಹಿಡಿದಿಟ್ಟು ದಾಖಲೆ ಮಾಡುವುದೇ ಅತ್ಯಂತ ಆಳವಾದ ಪ್ರತಿಭಟನೆಯಾಗುತ್ತದೆ" (ಅಧ್ಯಯನ, ಪು. ೧೨೪). ಇದೇ ಮಾತುಗಳನ್ನು ರಹಮತ್ ತರೀಕೆರೆಯವರು ಪುನರುಚ್ಛರಿಸುತ್ತಾರೆ (ಪ್ರತಿಸಂಸ್ಕೃತಿ, ಪು. ೧೫೫). ಶಿವರಾಮಯ್ಯ 'ಸಾಹಿತ್ಯ ಪರಿಸರ'ದ ಕುಸುಮಬಾಲೆ ಕುರಿತ ಲೇಖನದಲ್ಲಿ ಇದೇ ಜಾಡನ್ನು ಹಿಡಿದು ಸಮರ್ಥಿಸಿದ್ದಾರೆ. (ರಾಜೇಂದ್ರ ಚೆನ್ನಿಯವರು ಹಾಕಿದ ಈ ಗೆರೆಯನ್ನು ಯಾರೂ ಪ್ರಶ್ನೆ ಮಾಡಲಿಲ್ಲ; ದಾಟಲಿಲ್ಲ.)

ಪುರುಷೋತ್ತಮ ಬಿಳಿಮಲೆ ಅವರು ಇದನ್ನು ಅವರ 'ಶಿಷ್ಟ ಪರಿಶಿಷ್ಟ'ದಲ್ಲಿ ಒಂದು ಕಡೆ ಸಂಗ್ರಹಿಸಿದ್ದಾರೆ. "ಪ್ರತಿಭಟನೆ ಎಂದರೆ ಆರ್ಭಟ ಇಲ್ಲವೆ ನಿಂದನೆ ಎಂದು ಭಾವಿಸುವ ಮಂದಿಗೆ ದೇವನೂರರ ಪ್ರತಿಭಟನೆ ಅರ್ಥವಾಗಲಾರದು. ಮನಜರ ಮಾತನ್ನು ಆಧರಿಸಿಕೊಂಡು ಕೆ.ವಿ. ನಾರಾಯಣರೂ ಕೂಡ ದೇವನೂರರನ್ನು ದಲಿತ ಸಾಹಿತ್ಯದಿಂದ ಹೊರತೆಗೆಯುವ ಸಂಭ್ರಮದಲ್ಲಿದ್ದಾರೆ. ಆದರೆ ರಹಮತ್ ತರೀಕೆರೆಯವರು ಮತ್ತು ರಾಜೇಂದ್ರ ಚೆನ್ನಿಯವರು ದೇವನೂರರಲ್ಲಿ ಕಂಡುಬರುವ ಪ್ರತಿಭಟನೆಯ ವಿಶಿಷ್ಟವನ್ನು

ಮಹತ್ವವನ್ನು ಸರಿಯಾಗಿ ಗುರುತಿಸಿದ್ದಾರೆ" (ಶಿಷ್ಟ ಪರಿಶಿಷ್ಟ, ಪು. ೧೪೬). ಈಗ ಪುರುಷೋತ್ತಮ ಬಿಳಿಮಲೆ ಅವರ ಧಾಟಿಯನ್ನೇ ಹಿಡಿದು ಮುಂದುವರಿಯುವುದಾದರೆ, ಮನಜ ಮತ್ತು ಕೆ.ವಿ. ನಾರಾಯಣರಿಗೆ ಹೇಗೆ ದೇವನೂರರ ಪ್ರತಿಭಟನೆ ಅರ್ಥವಾಗಲಾರದೋ ಹಾಗೆಯೇ, ಇದು ಅರ್ಥವಾಗಿರುವ ಆ ಮೂವರಿಗೂ ದೇವನೂರರ ಪ್ರತಿಭಟನಾ ಮಾದರಿಯ ಹಿಂದಿರುವ ಧೋರಣೆ ಅರ್ಥವಾಗಲಾರದು. ಕೇವಲ ಪ್ರತಿಭಟನಾ ಮಾದರಿಯನ್ನು ಮೇಲ್‌ಸ್ತರದಲ್ಲಿ ಗುರುತಿಸುವುದೇ ವಿಮರ್ಶೆ ಎಂದು ಭಾವಿಸುವ ಮಂದಿಗೆ, ಅದರ ಹಿಂದಿರುವ ಧೋರಣೆ ಮತ್ತು ಸಾಮಾಜಿಕ ಪರಿಣಾಮ ಅರ್ಥವಾಗಲಾರದು; ಮುಖ್ಯವೂ ಆಗಲಾರದು. ಪುರುಷೋತ್ತಮ ಬಿಳಿಮಲೆಯವರ ಈ ಆಕ್ಷೇಪ ಬಹುಶಃ ಓದು ಮತ್ತು ಸಾಮಾಜಿಕ ಪರಿಣಾಮಗಳ ನಡುವಿನ ವೈರುಧ್ಯವನ್ನು ಸ್ಪಷ್ಟಮಾಡಿಕೊಳ್ಳದ ಗೊಂದಲದಲ್ಲಿದೆ ಎನಿಸುತ್ತದೆ.

ಆರ್ಕೆ ಮಣಿಪಾಲ ಅವರು ತಮ್ಮ 'ಸಾಹಿತ್ಯ: ಆಶಯ ಮತ್ತು ವಿನ್ಯಾಸ'ದಲ್ಲಿ ದೇವನೂರು ಸಾಹಿತ್ಯದಲ್ಲಿನ ತಂತ್ರವನ್ನು ಆಧಾರವಾಗಿಟ್ಟುಕೊಂಡು, ವಸ್ತುವಿನ ವಿನ್ಯಾಸ, ಆಶಯ, ಕಥಾವಸ್ತುವಿನ ಬೆಳವಣಿಗೆಯೊಂದಿಗೆ ಪಾತ್ರವೂ ಬೆಳೆಯುತ್ತಾ ಹೋಗುವುದನ್ನು ಗುರುತಿಸಿದ್ದಾರೆ. ವರ್ಣ ವರ್ಗ ಸಂಘರ್ಷವನ್ನು ಉತ್ಪಾದನಾ ಸಂಬಂಧಗಳ ಹಿನ್ನೆಲೆಯಲ್ಲಿ ಅರ್ಥೈಸಿರುವ ಈ ಲೇಖನದಲ್ಲಿ ದೇವನೂರು ಸಾಹಿತ್ಯದ ಬಗ್ಗೆ ಕೆಲವು ಸೂಕ್ಷ್ಮ ಒಳನೋಟಗಳು ಸಿಗುತ್ತವೆ. ಅಮಾಸ ಕತೆಯ ಅಮಾಸನನ್ನು ಕುಸುಮಬಾಲೆಯ ಅಮಾಸನೊಂದಿಗೆ ಸಮೀಕರಿಸಲಾಗಿದೆ. ಆಚಾರ್ಯರ ಮಗಳು ಭಗವತಿಗೆ ಬೆಳಗಿನ ಜಾವದ ಕನಸಿನಲ್ಲಿ ಅಮಾಸ ಕಾಣಿಸಿಕೊಂಡು ಅಪ್ಪಿಕೊಳ್ಳುವುದನ್ನು ಉಲ್ಲೇಖಿಸಿ, ಇದು ಇಡಿಯ ದಲಿತ ಜನಾಂಗದ ಮಾನಸಿಕ ಕ್ಷಿತಿಜದ ವಿಕಾಸವೆಂದೂ, ವರ್ಣಸಂಕರ ಮುಖ್ಯವೆಂದೂ ತೀರ್ಮಾನಿಸಲಾಗಿದೆ. ಕೇವಲ ಕನಸಿನ ಸ್ಥಿತಿಯಲ್ಲಿ ಬೆಳವಣಿಗೆಯನ್ನು ಪ್ರಕಟಿಸುವ ಕಥನ ತಂತ್ರದ ಬಗ್ಗೆಯಾಗಲಿ, ಮುಟ್ಟು ಕೂತ ಹುಡುಗಿಯರ ಸೀರೆಯನ್ನು ಅಮಾಸ ಬಾಡಿಗೆ ಸೈಕಲಲ್ಲಿ ಕೊಂಡೊಯ್ಯುವುದನ್ನಾಗಲಿ ಪ್ರಶ್ನಿಸುವುದೇ ಇಲ್ಲ. ಈ ಎಲ್ಲವೂ ಬೆಳವಣಿಗೆ ಸರಿ. ಆದರೆ ಯಾವ ದಿಕ್ಕಿನ ಬೆಳವಣಿಗೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು.

ಕುಸುಮಬಾಲೆಯ ಬಗ್ಗೆ ಅಪ್ಪಟ ದಲಿತ ಪ್ರಜ್ಞೆಯಿಂದ ಪ್ರತಿಕ್ರಿಯಿಸಿದ ಮುಳ್ಳೂರು ನಾಗರಾಜರ ವಿಮರ್ಶೆಯನ್ನು ಉಳಿದ ವಿಮರ್ಶಕರು ಮುಖ್ಯವೆಂದು ಎಲ್ಲಿಯೂ ಪರಿಗಣಿಸಲೇ ಇಲ್ಲ. ಬದಲಾಗಿ ರಾಜೇಂದ್ರ ಚೆನ್ನಿಯವರ ವಿಮರ್ಶೆಯೇ ಮುಖ್ಯವಾಯಿತು. 'ಕುಸುಮಬಾಲೆ ಸದ್ಯಕ್ಕೆ ಉಳ್ಳವರ ಮೇಲು ವರ್ಗದವರ ಆತ್ಮ ಚರಿತ್ರೆಯಾಗಿದೆ. ಆ ಕತೆಯ ಒಡಲಿನಿಂದ ಆ ಕಲಾತ್ಮಕ ಚೆಲುವಿನ ಭಾಷೆಯನ್ನು ತೆಗೆದುಬಿಟ್ಟರೆ ಅದು ದಲಿತರ ನೇಣುಗಂಬದಂತೆ ಕಾಣುತ್ತದೆ" (ಸಂಕ್ರಮಣ ೨೨೪) ಎಂದು ಸರಿಯಾಗಿಯೇ ಗುರುತಿಸಿದ ಮುಳ್ಳೂರರ ವಿಮರ್ಶೆಯನ್ನು ವಾರೆಗಣ್ಣಿನಿಂದ ನೋಡಿದ ದಲಿತೇತರ ವಿಮರ್ಶೆ ತನ್ನ ಒಲವನ್ನು ಬಹುತೇಕ 'ಆಡುಮಾತಿನ ಕಾವ್ಯ'

(ಪೋಲಂಕಿ ರಾಮಮೂರ್ತಿ, ಸಾಹಿತ್ಯ ವಿಮರ್ಶೆ, ೧೯೯೦, ಪುಟ - ೯೮)ದ ಕಡೆಗೆ ವಾಲಿಸಿತು.

ಲಂಕೇಶರು 'ದೇವನೂರ ಮಹಾದೇವ ಅವರ ಕೃತಿಗಳು' ಪುಸ್ತಕಕ್ಕೆ ಮುನ್ನುಡಿ ಬರೆದಿದ್ದಾರೆ. ಅದರಲ್ಲಿ ಕತೆಗಳ ಬಗ್ಗೆ ವಿಶ್ಲೇಷಣೆ ಇದೆ. ಇಲ್ಲಿ ಲಂಕೇಶರು ಮಂಡಿಸುವ ನಾಲ್ಕು ತೀರ್ಮಾನಗಳು ಅತ್ಯಂತ ಕುತೂಹಲಕಾರಿಯಾಗಿವೆ. ೧. ಡಾಂಬರು ಬಂದುದು ಕತೆಯ ಪಟೇಲರ ನೋವಿನ ಎದುರು ಲಕುಮ,ರಾಜಪ್ಪ, ಶಂಭು, ಮಾಧು ಇವರ ಪ್ರತಿಭಟನೆ ಕಾವು ಕಳೆದುಕೊಳ್ಳುತ್ತದೆ. ೨. ಗ್ರಸ್ತರು ಕತೆಯ ನಾಯಕನಿಗೆ ಓದಲು ಸಾಲ ಕೊಟ್ಟು ಕೆಲಸ ಕೊಡಿಸಿದವರು ಗೌಡರು. ಗೌಡರು ಕೆಟ್ಟವರಲ್ಲ, ಒಳ್ಳೆಯ ಆಶಯಗಳುಳ್ಳವರು. ೩. ಮಾರಿಕೊಂಡವರು ಕತೆಯಲ್ಲಿ ಕಿಟ್ಟಪ್ಪ ಲಕ್ಷ್ಮಿಯರ ಸಂಬಂಧ ಕುರಿತು: ಕತೆಯ ಗೌಡರ ಮಗ ರಾಕ್ಷಸನೇನೂ ಅಲ್ಲ. ಸರ್ವೇಸಾಮಾನ್ಯ ಅಪಾಪೋಲಿ ಹುಡುಗ. ಕೊಲೆಗಿಲೆ ಮುಂತಾಗಿ ಕತೆಯಲ್ಲಿ ಎಲ್ಲಿದೆ ಪ್ರತಿಭಟನೆ ಸಿಟ್ಟು? ಅದು ಆತ್ಮ ಗೌರವದಲ್ಲಿ. ರಂಗಪ್ಪನ ಹಸಿವು ಮತ್ತು ಎಲ್ಲದಕ್ಕೂ ತಲೆಯಾಡಿಸುತ್ತಾ ನಡೆಯುವ ಸಜ್ಜನಿಕೆಯಲ್ಲಿ. ಇವಕ್ಕೆ ಮತ್ತೆ ವಿಶ್ಲೇಷಣೆ ಬೇಕಾಗಿಲ್ಲ. ಮೇಲ್ನೋಟಕ್ಕೇ ಸ್ಪಷ್ಟವಾಗುತ್ತದೆ. ಅಪ್ಪಟ ಫ್ಯೂಡಲ್ ಸ್ವಭಾವದ ವ್ಯಕ್ತಿಯೊಬ್ಬನ ಖಾಸಾ ಅನುಭವದಲ್ಲಿ ಅದ್ದಿ ತೆಗೆದಂತಿವೆ ಈ ಅಭಿಪ್ರಾಯಗಳು.

ದೇವನೂರರ ಕತೆಗಳನ್ನು ಕುರಿತು ವಿಶ್ಲೇಷಣೆ ಮಾಡಿರುವ ಎಸ್.ಆರ್. ವಿಜಯ ಶಂಕರ ಅವರು ಸದ್ಯಕ್ಕಂತೂ ಸಾಮಾಜಿಕ ದೃಷ್ಟಿಕೋನದಿಂದ ದಲಿತ ಸಾಹಿತ್ಯವನ್ನು ನೋಡುತ್ತಿದ್ದೇವೆ. ಆದರೆ ಇದೇ ಮಾನದಂಡಗಳು ಸ್ಥಿರವಾಗಿ ಉಳಿಯಬೇಕೆ? ಎಂಬರ್ಥದ ಸೂಕ್ಷ್ಮ ಹೊಳವು ಕೊಡುವುದರ ಮೂಲಕ ಮುಂದಿನ ಅಧ್ಯಯನ ಸಾಧ್ಯತೆಗಳ ಬಗ್ಗೆ ಸೂಚ್ಯವಾಗಿ ಬೆಟ್ಟು ಮಾಡುತ್ತಾರೆ. (ಮನೋಗತ, ಪು. ೮೭ - ೮೫)

ಒಡಲಾಳದ ಬಗ್ಗೆ ಅನಂತಮೂರ್ತಿಯವರೂ, ಕುಸುಮಬಾಲೆಯ ಬಗ್ಗೆ ರಾಜೇಂದ್ರ ಚೆನ್ನಿಯವರೂ ಬರೆದಿರುವ ವಿಮರ್ಶೆಯನ್ನು ಮೆಚ್ಚಿಕೊಂಡು, ಅವರ ಧಾಟಿಯನ್ನೇ ಅನುಸರಿಸಿ, ಸಾಂಸ್ಕೃತಿಕ ಕಾಳಜಿಯ ಗೈರು ಹಾಜರಿಯಲ್ಲಿ ಟಿ.ಪಿ. ಅಶೋಕ ಅವರು ಕುಸುಮಬಾಲೆಯ ಬಗ್ಗೆ (ಸಾಹಿತ್ಯ ಸಂದರ್ಭ, ಪು. ೬೯-೮೬) ಬರೆದಿರುವ ಲೇಖನ ಹೊಸದೇನನ್ನೂ ಹೇಳುವುದಿಲ್ಲ.

ಕುಸುಮಬಾಲೆಯ ಭಾಷೆ, ಶೈಲಿ, ತಂತ್ರ- ಇವುಗಳನ್ನು ಪ್ರಧಾನ ಭಿತ್ತಿಯಾಗಿಟ್ಟುಕೊಂಡು ರಾಜೇಂದ್ರ ಚೆನ್ನಿಯವರು ದೀರ್ಘವಾದ ವಿಶ್ಲೇಷಣೆ ಮಾಡಿದ್ದಾರೆ. (ಅಧ್ಯಯನ, ಪು. ೧೧೫ - ೧೨೯). ಕೃತಿಯ ಬಂಧದೊಳಗೇ ಎಲ್ಲವನ್ನೂ ಅರ್ಥೈಸಿ ವಿವರಿಸುವ ಮತ್ತು ಸಿದ್ಧ ಮಾದರಿಯ ಮಾನದಂಡಗಳ ಈ ವಿಶ್ಲೇಷಣೆ ಆ ಕೃತಿಯೊಳಗೇ ಗಿರಕಿ ಹೊಡೆದು ವಿರಮಿಸುತ್ತದೆ. ದಲಿತ ಬದುಕನ್ನು ವ್ಯವಸ್ಥೆಯ ಇತರೆ ಬಿಡಿ

ಘಟಕಗಳೊಂದಿಗೆ ಅಂತರ್‌ಸಂಬಂಧ ಕಲ್ಪಿಸಿ ನೋಡದ ಅಥವಾ ದಲಿತ ಬದುಕನ್ನು ಇಡಿಯಾಗಿ ಗ್ರಹಿಸುವ ವಿಧಾನವಿದು. ಇದರಿಂದಾಗಿ ಇವರಿಗೆ ಕುಸಮಬಾಲೆಯ ಭಾಷೆ ಜನಾಂಗದ ಭಾಷೆಯಾಗಿ ಕಾಣುತ್ತದೆ.

ದೇವನೂರರ ಕಲೆಗಾರಿಕೆಯನ್ನು ಪ್ರಧಾನವಾಗಿಟ್ಟುಕೊಂಡು ಅನಂತಮೂರ್ತಿಯವರು ಒಡಲಾಳದ ಬಗ್ಗೆ (ಪೂರ್ವಾಪರ, ಪು. ೧೨೮ - ೧೩೬) ಬರೆದಿದ್ದಾರೆ. ಇಲ್ಲಿ ಒಡಲಾಳದ ವಿವರಗಳು ದಲಿತರ ಸಾಂಸ್ಕೃತಿಕ ಬದುಕಿನೊಳಗೆ ಗಂಭೀರ ಚರ್ಚೆಗೆ ಒಳಗಾಗುವುದಿಲ್ಲ. ಬದಲಾಗಿ ಅವು ಹೇಗೆ ಕಲೆಯಾಗಿ ಮೈದಾಳಿವೆ ಎಂಬುದು ಮುಖ್ಯವಾಗುತ್ತದೆ. ಅಂದರೆ ಕಲಾವಿದನ ಕಲೆಗಾರಿಕೆಯನ್ನು ಕೊಂಡಾಡುವ ಕಡೆಗೇ ಹೆಚ್ಚು ಒತ್ತು ಬಿದ್ದಿದೆ. ಜೊತೆಗೆ ದಲಿತರ ಹೊಟ್ಟೆಪಾಡಿನ ಪ್ರಶ್ನೆಯ ಗಂಭೀರ ಸಮಸ್ಯೆಯು ಹೊಟ್ಟೆ ತುಂಬಿದ ವೈದಿಕ ಪುರೋಹಿತಶಾಹಿಯ ಕುತಂತ್ರದ ಮಂತ್ರಗಳಲ್ಲಿ ಮರುಜೀವ ಪಡೆದು ತನ್ನ ಅರ್ಥವಂತಿಕೆಯನ್ನು ಬಿಚ್ಚಿಕೊಳ್ಳುತ್ತದೆ. ಹಾಗಾಗಿ ಇವರಿಗೆ "ಕಡಲೆಕಾಯಿ ತಿನ್ನುತ್ತಾ ಬೆಂಕಿ ಎದುರು ಇಡೀ ಹಟ್ಟಿ ಸೇರಿದಾಗ 'ಸಹವೀರ್ಯಂ ಕರವಾವಹೈ' ನೆನಪಾಗುತ್ತದೆ. ಉಣ್ಣುವಂಥ ಒಂದು ನಿತ್ಯದ ಸಾಮಾನ್ಯ ಕ್ರಿಯೆಯೂ ಇಲ್ಲಿ ಯಜ್ಞಕ್ಕೆ ಸಮಾನವಾದ ರಿಚುಯಲ್ ಆಗಿ ಕಾಣುತ್ತದೆ. ಉಪನಿಷತ್ತಿನ ಆದರ್ಶವಾದ ಮಾನವ ಸಹಚರ್ಯದ ಕ್ರಿಯೆಯ ದರ್ಶವಾಗುತ್ತದೆ" (ಪೂರ್ವಾಪರ, ಪು. ೧೩೪). ಭೂಮಿಯಿದ್ದೂ ದುಡಿಯದ "ಕದ್ದಾದರೂ ಬಾಳುವ ಉಪಾಯಗಾರರಾದ ದಲಿತರ" (ಪೂರ್ವಾಪರ, ಪು. ೧೩೧) ಹೊಟ್ಟೆಪಾಡಿನ ಅವಹೇಳನಕಾರಿ ಚಿತ್ರಣ ವೈದಿಕ ಪುರೋಹಿತಶಾಹಿ ಮನಸ್ಸಿನ ಅನಂತಮೂರ್ತಿಯವರಿಗೆ ಉಪನಿಷತ್ತಿನ ಮಂತ್ರವನ್ನು ನೆನಪಿಗೆ ತಂದರೆ ತಪ್ಪಲ್ಲ. ಏಕೆಂದರೆ ವೈದಿಕ ಪುರೋಹಿತಶಾಹಿ ಮಾಡಿದ್ದು ಇದೇ ಧಾಟಿಯ ಕೆಲಸವನ್ನು, ಸ್ವರೂಪ ಮಾತ್ರ ಬೇರೆಯಷ್ಟೆ.

ಅನಂತಮೂರ್ತಿಯವರಿಗೆ ಹೀಗೆ ಕಲೆಯೇ ಪ್ರಧಾನವಾದರೆ, ಮತ್ತೆ ಕೆಲವರಿಗೆ ಕಾವ್ಯಾತ್ಮಕ ಗುಣ ಮುಖ್ಯವಾಗುತ್ತದೆ. "ಮಾರಿಕೊಂಡವರು ಕತೆಯಲ್ಲಿ ಅಲ್ಲಿನ ನಾಯಕ ಗಂಡಸುತನವನ್ನೇ ತಿವಿದು ಗಾಯಗೊಳಿಸುವಂತೆ, ಹಣವಂತ ಮೇಲುವರ್ಗದವರು ಮಾಡುವ ಲೈಂಗಿಕ ಶೋಷಣೆಯನ್ನು,ತನ್ನ ಬದುಕಿನ ಅಸ್ತಿತ್ವಕ್ಕಾಗಿ ಸಹಿಸುವಲ್ಲಿನ ಆರ್ಥಿಕ ಸಾಮಾಜಿಕ ಅಸಹಾಯಕತೆಯನ್ನು

ಯಾತಕ್ಕೊ ಕಿಟ್ಟಪ್ಪ ನಕ್ಕ

ಬೀರನೂ ನಕ್ಕ

ಎಂಬಂಥ ಎರಡು ಸಾಲುಗಳಲ್ಲಿ ದೇವನೂರರು ಹಿಡಿದಿಡುತ್ತಾರೆ. ದೇವನೂರ ಮಹಾದೇವ ಗದ್ಯವನ್ನು ಪದ್ಯದಂತೆ ಬಳಸುತ್ತಾ ಅತ್ಯುತ್ತಮ ಕಲಾಕಾರನಾಗುವ ಸಂದರ್ಭ

ಇಲ್ಲಿ ಬಹಳ ಮುಖ್ಯ" (ಸಂಕ್ರಮಣ ಸಾಹಿತ್ಯ ಸಂಪುಟ ಎರಡು - ಪುಟ ೧೨೫ - ರಹಮತ್ ತರೀಕೆರೆಯವರ ಲೇಖನ).

ರಹಮತ್ ತರೀಕೆರೆಯವರಿಗೆ ಗದ್ಯವು ಪದ್ಯದ ಪರಿಣಾಮವನ್ನುಂಟುಮಾಡುತ್ತದೆ ಎಂಬುದೇ ಮುಖ್ಯವಾಗಿದೆ. ಆದರೆ ಇದರ ಸಾಮಾಜಿಕ ನೆಲೆಗಟ್ಟಿನ ಪರಿಣಾಮವೆಂತಹುದು ಎಂಬುದು ಇವರಿಗೆ ಮುಖ್ಯವಾಗುವುದೂ ಇಲ್ಲ; ಬೇಕಾಗಿಯೂ ಇಲ್ಲ. ಅಲ್ಲದೆ ರಹಮತ್ ಅವರು ಮೇಲ್‌ಸ್ತರದಲ್ಲಿ ತೀರಾ ಸರಳವಾಗಿ ಗುರುತಿಸುವಂತೆ, ಮೇಲೆ ಉಲ್ಲೇಖಿಸಿರುವ ಕತೆಯ ಕೊನೆಯ ಸಾಲುಗಳು ಅಂಥಾ ತೀವ್ರವಾದ ಪರಿಣಾಮವನ್ನೇನೂ ಉಂಟುಮಾಡುವುದಿಲ್ಲ. ಏಕೆಂದರೆ ಇದಕ್ಕೆ ಪೂರ್ವ-ಸೂಚನೆಯೆಂಬಂತೆ ಕತೆಯ ಮಧ್ಯದಲ್ಲೇ ಬರುವ ಕೆಲವು ಸಾಲುಗಳನ್ನು ಗಮನಿಸಬೇಕು. "ಕತ್ತಲಾಗಿ ಚಣಹೊತ್ತು ಕಳೆಯಲು ಕಿಟ್ಟಪ್ಪ ತುಂಬವೆ ಶಿಸ್ತು ಮಾಡಿಕೊಂಡು ಬಂದರು. 'ಏನಾರ ಮದ್ವೆ ಹೆಣ್ಣ ನೊಡಾಕ ಬಂದಿದಿರಾ ಕಿಟ್ಟಪ್ಪ?' ಬೀರ ನಗುನಗುತ್ತಾ ಅಂದಾಗ ಕಿಟ್ಟಪ್ಪನೂ ನಕ್ಕನು." ರಹಮತ್ ಅವರು ಗುರುತಿಸುವಂತೆ ಪರಿಣಾಮ ಕೊನೆಯವರೆಗೂ ಉಳಿದುಕೊಂಡಿರುವುದಿಲ್ಲ ಮತ್ತು ಅದು ಪದ್ಯದಂಥ ಸಾಲುಗಳಲ್ಲೇ ಪ್ರಕಟವಾಗಬೇಕಾಗಿಯೂ ಇಲ್ಲ.

ಇದಕ್ಕಿಂತಲೂ ಇಲ್ಲಿ ಮುಖ್ಯವಾಗುವ ಮತ್ತೊಂದು ಪ್ರಧಾನ ಅಂಶವಿದೆ. ಮೇಲಿನ ಉಲ್ಲೇಖಿತ ಸಾಲುಗಳಲ್ಲಿ ಬೀರನ ಅಸಹಾಯಕತೆಯ, ಹೇಡಿತನದ, ನಿರ್ವೀಯರ್ತೆಯ ಮೌಲ್ಯ ಪ್ರಕಟವಾಗಿದೆ. ದಲಿತರ ಈ ದುರಂತ ಮೌಲ್ಯದ ಪ್ರತಿಪಾದನೆಯ ಸಾಮಾಜಿಕ ಪ್ರಸ್ತುತತೆ ಮತ್ತು ಪರಿಣಾಮದ ಮಗ್ಗುಲುಗಳು ಇವರಿಗೆ ಮುಖ್ಯವಾಗುವುದೇ ಇಲ್ಲ. ಇದನ್ನು ಮಣ್ಣುಮುಕ್ಕಿಸುವ ಸಲುವಾಗಿಯೇ ಕಲೆಗಾರಿಕೆ, ಕಲಾತ್ಮಕ ಅಂಶಗಳನ್ನು ಎತ್ತಿಹಿಡಿಯುತ್ತಾರೆ.

ನಮ್ಮಲ್ಲಿ ಈಗ ಪ್ರತಿಸಂಸ್ಕೃತಿಯ ಪರಿಕಲ್ಪನೆ ಸ್ಪಷ್ಟತೆಯನ್ನು ಪಡೆದಿಲ್ಲ. ಇನ್ನು ಪ್ರತಿಸಂಸ್ಕೃತಿಯ ನಿರ್ಮಾಣ ಎಂದರೆ ಅದು ಒಂದು ರೀತಿಯಲ್ಲಿ ಅಸ್ಪಷ್ಟ, ಮತ್ತೊಂದು ರೀತಿಯಲ್ಲಿ ಹಾಸ್ಯಾಸ್ಪದ. ಆದರೆ ಶಿವರಾಮಯ್ಯ ಅವರು ಕುಸುಮಬಾಲೆಯನ್ನು 'ಪ್ರತಿ ಸಂಸ್ಕೃತಿ ನಿರ್ಮಾಣ' ಎಂಬ ಚೌಕಟ್ಟಿನಲ್ಲಿ ಅರ್ಥಾರೋಪಿಸುವ ಪ್ರಯತ್ನ ಮಾಡಿದ್ದಾರೆ. ಈ ಜಾಡಿಗೇ ಕಟ್ಟು ಬಿದ್ದಿರುವುದರಿಂದ ಕುಸುಮಬಾಲೆಯ ಬಗ್ಗೆ ಕೊಡಬಹುದಾಗಿದ್ದ ಒಳನೋಟಗಳೂ ಇಲ್ಲವಾಗಿವೆ. ಕೆಲವು ಭಾಗಗಳಲ್ಲಂತೂ ಪ್ರಯತ್ನಪೂರ್ವಕ ಒತ್ತಾಯ ಎದ್ದು ಕಾಣುತ್ತದೆ.

ದೇವನೂರ ಮಹಾದೇವ ಅವರು ದಲಿತ ಸಮೂಹದ ಮೊದಲ ತಲೆಮಾರಿನ ಲೇಖಕರು. ಈ ಮೊದಲ ತಲೆಮಾರಿಗೆ, ಔಪಚಾರಿಕ ಶಿಕ್ಷಣ, ಸರ್ಕಾರಿ ನೌಕರಿ ಮತ್ತಿತರೆ ಕೆಲವು ಅವಕಾಶಗಳು ಸಿಕ್ಕಿದವು. ಈ ನೆಲೆಯಲ್ಲಿ ದಲಿತ ಲೋಕವನ್ನು ಗ್ರಹಿಸುವ,

ಪರಿಭಾವಿಸುವ 'ಒಂದು ಮಾದರಿ' ದೇವನೂರರ ಸಾಹಿತ್ಯದಲ್ಲಿದೆ. ಆದರೆ ಈ ತಾತ್ವಿಕತೆಯೇ ಇಡಿಯಾಗಿ ಸಮಸ್ತ ದಲಿತ ಲೋಕಕ್ಕೆ ಅನ್ವಯಿಸಬೇಕಿಲ್ಲ. ದಲಿತ ಸಮೂಹದಲ್ಲೇ ಎರಡನೇ ತಲೆಮಾರು ಎದುರಿಸುತ್ತಿರುವ ಸಮಸ್ಯೆಗಳು ಇನ್ನೊಂದಷ್ಟು ಸಂಕೀರ್ಣವಾಗಿವೆ. ಹಾಗಾಗಿ ದೇವನೂರರ ಸಾಹಿತ್ಯದಲ್ಲಿ ನಿಷ್ಪನ್ನಗೊಳ್ಳುವ ತಾತ್ವಿಕತೆಯನ್ನು ಮತ್ತೆ ಮತ್ತೆ ಪ್ರಶ್ನಿಸುವ ಅಗತ್ಯ ಬಹಳವಿದೆ.

ಇವರ ಸಾಹಿತ್ಯದ ಮೇಲೆ ಬಂದಿರುವ ವಿಮರ್ಶೆ ಬಹುತೇಕ ಉದಾರವಾದಿ ನಿಲುವಿನ ಮಾದರಿಯದು. ಇದರ ಹಿಂದೆ ಸಾಮಾಜಿಕ ಸಾಂಸ್ಕೃತಿಕವೆನ್ನಬಹುದಾದ ಕಾರಣಗಳು ಇದ್ದಿರಲೂಬಹುದು. ಅದಕ್ಕಾಗಿಯೇ ಇರಬೇಕು. ದೇವನೂರು ಏನು ಬರೆದರು ಎಂಬುದು ಗೌಣವಾಗಿ, ಹೇಗೆ ಬರೆದರು ಎಂಬುದೇ ಮುಖ್ಯವಾಗಿದೆ. ಹಾಗಾಗಿ ಈಗ ಮಧ್ಯವರ್ತಿ ವಿಮರ್ಶೆಯನ್ನು ಗಂಭೀರವಾಗಿ ಪ್ರಶ್ನಿಸುತ್ತಾ ನೇರವಾಗಿ ಅವರ ಕೃತಿಗಳಿಗೇ, ಕೃತಿಗಳೊಳಗೇ ಹೋಗಬೇಕಾಗಿದೆ.



## ಲೇಖನ ಸೂಚಿ

೧. ಲಂಗರು ಕತೆ, ಪ್ರತೀಕ, ಜುಲೈ ೧೯೬೯, (ಸಂ) ಶಾಂತರಸ, ರಾಯಚೂರು.

೨. ಖಾಸನೀಸ ಮುಖೇನ ಸಣ್ಣಕತೆ, ವಿಮರ್ಶೆ, ಸಾಕ್ಷಿ ೧೮, ಜನವರಿ ೧೯೭೩.

೩. ಬಂಡೆಗಳ ಮೇಲೆ ಚಿಗುರು.......... ಸಂಕ್ರಮಣ, ಏಪ್ರಿಲ್ - ಮೇ ೧೯೭೯.

೪. ಮೀಸಲಾತಿ ಗೊಂದಲ: ಒಂದು ಒಳನೋಟ, ಸಂವಾದ ೨೫, ಜನವರಿ - ಫೆಬ್ರವರಿ ೧೯೯೨.

೫. ನಾನು ಗಾಂಧಿ ಚಿತ್ರ ನೋಡಿದೆ

ಆಕಾಶದೆತ್ತರಕ್ಕೆ ಎರಡು ಗೇಣು ಕಮ್ಮಿ ಪುಟ ೧೬೯, ಚಂಡಾಳ, ೧೯೯೨ ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್, ಚೈತ್ರ ಪ್ರಕಾಶನ.

೬. ಆ್ಯನ್ ಓಪನ್ ಲವ್ ಲೆಟರ್ ಟು ಟೂ ಡಾರ್ಲಿಂಗ್ಸ್ ಕಂಸಾಳೆ, ಸಂಚಿಕೆ ೨ (ಸಂ) ವೆಂಕಟೇಶ ಇಂದ್ವಾಡಿ.

೭. ಮಾನವೀಯತೆ ಅಂತಾರಲ್ಲ ಆ ಬಗ್ಗೆ ವಿವೇಚನೆ, ವಿಚಾರ ಸಾಹಿತ್ಯ - ೨ ಬೆಂಗಳೂರು ವಿಶ್ವವಿದ್ಯಾನಿಲಯ (ಪುಟ.೬೨-೭೫).

೦

## ಹೆಚ್ಚಿನ ಓದು


೧. ಅನಂತಮೂರ್ತಿ,ಯು.ಆರ್ ೧೯೯೦ ಪೂರ್ವಾಪರ, ಅಕ್ಷರ ಪ್ರಕಾಶನ, ಹೆಗ್ಗೋಡು.

೨. ಅನಂತಮೂರ್ತಿ,ಯು.ಆರ್ ೧೯೯೨ ಸಮಕ್ಷಮ, ಅಕ್ಷರ ಪ್ರಕಾಶನ, ಹೆಗ್ಗೋಡು.

೩. ಅರವಿಂದ ಮಾಲಗಿತ್ತಿ (ಸಂ) ೧೯೯೧ ನಾಲ್ಕು ದಲಿತೀಯ ಕಾದಂಬರಿಗಳು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೪. ಅಶೋಕ,ಟಿ.ಪಿ. ೧೯೯೧ ಸಾಹಿತ್ಯ ಸಂದರ್ಭ, ಅಕ್ಷರ ಪ್ರಕಾಶನ, ಹೆಗ್ಗೋಡು.

೫. ಆಮೂರ,ಜಿ.ಎಸ್. ೧೯೮೮ ಅರ್ಥಲೋಕ, ಸ್ನೇಹ ಪ್ರಕಾಶನ, ಬೆಂಗಳೂರು.

೬. ಆಮೂರ, ಜಿ.ಎಸ್. ೧೯೯೨ ವ್ಯವಸಾಯ, ಸ್ನೇಹ ಪ್ರಕಾಶನ, ಬೆಂಗಳೂರು.

೭. ಆರ್ಕೆ ಮಣಿಪಾಲ ೧೯೮೮ ಸಾಹಿತ್ಯ: ಆಶಯ ಮತ್ತು ವಿನ್ಯಾಸ, ಸಂಕ್ರಮಣ ಪ್ರಕಾಶನ, ಧಾರವಾಡ.

೮. ಕರೀಗೌಡ ಬೀಚನಹಳ್ಳಿ ೧೯೯೧ ವ್ಯಷ್ಟಿ- ಸಮಷ್ಟಿ, ಅಂಜತ ಪ್ರಕಾಶನ, ೩೧, ೮೦ ಅಡಿ ರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು.

೯. ಗಿರಡ್ಡಿ ಗೋವಿಂದರಾಜ ೧೯೭೮ ಸಣ್ಣ ಕತೆಯ ಒಲವುಗಳು

೧೦. ಚಂಡಾಳ ೧೯೯೨ ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್, ಚೈತ್ರ ಪ್ರಕಾಶನ.

೧೧. ಚಂದ್ರಶೇಖರ ಪಾಟೀಲ(ಸಂ) ೧೯೭೯ ಬಂಡಾಯ ಸಾಹಿತ್ಯ ವಿಶೇಷಾಂಕ ಸಂಕ್ರಮಣ, ಏಪ್ರಿಲ್, ಮೇ ೧೯೭೯.

೧೨. ಚಂದ್ರಶೇಖರ ಪಾಟೀಲ ೧೯೯೧ ಕುಸುಮಬಾಲೆ ಮತ್ತು ಬತ್ತಲೆ ರಾಜ - ಚಂಪಾ ಕಾಲಂ, ಸಂಕ್ರಮಣ ಫೆಬ್ರವರಿ ೧೯೯೧

೧೩. ಚಂದ್ರಶೇಖರ ಪಾಟೀಲ(ಸಂ) ಕುಸುಮಬಾಲೆ: ದಲಿತರ ನೇಣುಗಂಬ, ಸಂಕ್ರಮಣ ೨೨೪ರ ಸಂಚಿಕೆ.

೧೪. ಚಂದ್ರಶೇಖರ ಪಾಟೀಲ(ಸಂ) ೧೯೯೩ ಸಂಕ್ರಮಣ ಸಾಹಿತ್ಯ ಸಂಪುಟ - ೨, ಸಂಕ್ರಮಣ ಪ್ರಕಾಶನ, ಧಾರವಾಡ.

೧೫. ದೇವಯ್ಯ ಹರವೆ ೧೯೯೧ ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೬. ನಾಗಭೂಷಣಸ್ವಾಮಿ, ಓ.ಎಲ್. ೧೯೯೧ ಸಾಹಿತ್ಯ ವಿಮರ್ಶೆ ೧೯೮೯, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೭. ಪುರುಷೋತ್ತಮ ಬಿಳಿಮಲೆ ೧೯೯೦ ಬಂಡಾಯ ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೮. ಪುರುಷೋತ್ತಮ ಬಿಳಿಮಲೆ ೧೯೯೨ ಶಿಷ್ಟ ಪರಿಶಿಷ್ಟ, ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ಮಂಗಳೂರು.

೧೯. ಬಸವರಾಜ ಸಬರದ ೧೯೯೦ ಹೊಸದಿಕ್ಕು, ಪಲ್ಲವಿ ಪ್ರಕಾಶನ, ಬೀದರ್.

೨೦. ಮುರಳೀಧರ ಉಪಾಧ್ಯ ಹಿರಿಯಡಕ ೧೯೯೨ ಸಾಹಿತ್ಯ ವಿಮರ್ಶೆ ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೧. ಯಶವಂತ ಚಿತ್ತಾಲ ೧೯೯೦ ಸಾಹಿತ್ಯ ಸೃಜನಶೀಲತೆ, ಮತ್ತು ನಾನು ಗೀತಾ ಬುಕ್ ಹೌಸ್, ಮೈಸೂರು.

೨೨. ರಾಜೇಂದ್ರ ಚೆನ್ನಿ ೧೯೮೭ ಅಧ್ಯಯನ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

| | | |
|---|---|---|
| ೨೩. ಲಕ್ಕಪ್ಪಗೌಡ.ಎಚ್.ಜೆ. | ೧೯೯೦ | ಬಂಡಾಯ ಸಾಹಿತ್ಯ ಚಳುವಳಿ ಹತ್ತು ವರ್ಷ, ಕನ್ನಡ ಅಧ್ಯಯನ ವಿಭಾಗ, ಕುವೆಂಪು ವಿ.ವಿ. |
| ೨೪. ವಿಜಯಶಂಕರ ಎಸ್.ಆರ್. | ೧೯೮೫ | ಮನೋಗತ, ಅಕ್ಷರ ಪ್ರಕಾಶನ, ಹೆಗ್ಗೋಡು. |
| ಮಾಲತಿ.ಎಲ್.(ಸಂ) | ೧೯೮೦ | ಸಮುದಾಯ ವಾರ್ತಾಪತ್ರ, ಮೇ ೧೦, ೧೯೮೦. |




ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ

ಕುಲಪತಿಗಳು